## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ: ಡಿಪಿಎಆರ್ 06 ಪಿಎಲ್‌ಎಕ್ಸ್ 2012 ಬೆಂಗಳೂರು, ದಿನಾಂಕ: 06.11.2013.**

**ರಾಜ್ಯಪಾಲರು ಅನುಮೋದಿಸಿರುವ ಈ ಮುಂದಿನ ಆದೇಶವನ್ನು ಸಾರ್ವಜನಿಕ ಮಾಹಿತಿಗಾಗಿ ಈ ಮೂಲಕ ಪ್ರಕಟಿಸಲಾಗಿದೆ:–**

**ಕರ್ನಾಟಕ ಶೈಕ್ಷಣಿಕ ಸಂಸ್ಥೆಗಳ (ಹೈದ್ರಾಬಾದ್–ಕರ್ನಾಟಕ ಪ್ರದೇಶದಲ್ಲಿ ಪ್ರವೇಶ ನಿಯಂತ್ರಣ) ಆದೇಶ, 2013**

ಕರ್ನಾಟಕ (ಹೈದ್ರಾಬಾದ್–ಕರ್ನಾಟಕ ಪ್ರದೇಶಕ್ಕೆ ರಾಜ್ಯಪಾಲರ ವಿಶೇಷ ಹೊಣೆಗಾರಿಕೆ) ಆದೇಶ, 2013ರ 2ನೇ ಖಂಡದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ರಾಜ್ಯಪಾಲರು ಈ ಮೂಲಕ ಮುಂದಿನ ಆದೇಶವನ್ನು ಹೊರಡಿಸಿದ್ದಾರೆ, ಎಂದರೆ:–

**1. ಹೆಸರು, ಅನ್ವಯ ಮತ್ತು ಪ್ರಾರಂಭ.–** (1) ಈ ಆದೇಶವನ್ನು ಕರ್ನಾಟಕ ಶೈಕ್ಷಣಿಕ ಸಂಸ್ಥೆಗಳ (ಹೈದ್ರಾಬಾದ್–ಕರ್ನಾಟಕ ಪ್ರದೇಶದಲ್ಲಿ ಪ್ರವೇಶ ನಿಯಂತ್ರಣ) ಆದೇಶ, 2013 ಎಂದು ಕರೆಯತಕ್ಕದ್ದು.

(2) ಈ ಆದೇಶವು ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಕೋರ್ಸುಗಳಿಗೆ ಅನ್ವಯವಾಗತಕ್ಕದ್ದು.

(3) ಇದು, ಸರ್ಕಾರಿ ರಾಜ್ಯಪತ್ರದಲ್ಲಿ ಅದರ ಪ್ರಕಟಣೆಯ ದಿನದಂದು ಜಾರಿಗೆ ಬರತಕ್ಕದ್ದು.

**2. ಅರ್ಥ ವಿವರಣೆಗಳು.–** (1) ಈ ಆದೇಶದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) ಅಧ್ಯಯನದ ಯಾವುದೇ ಕೋರ್ಸಿನ ಸಂಬಂಧದಲ್ಲಿ "ಲಭ್ಯವಿರುವ ಸೀಟುಗಳು" ಎಂದರೆ, ರಾಜ್ಯ ಸರ್ಕಾರ ಅಥವಾ ವಿಶ್ವವಿದ್ಯಾಲಯ ಅಥವಾ ಹೈದ್ರಾಬಾದ್–ಕರ್ನಾಟಕ ಪ್ರದೇಶದಲ್ಲಿ ರಾಜ್ಯ ಸರ್ಕಾರದಿಂದ ಅಧಿಕೃತಗೊಳಿಸಲಾದ ಯಾವುದೇ ಇತರ ಪ್ರಾಧಿಕಾರವು ಹಂಚಿಕೆಗಾಗಿ ಯಾವುದೇ ಕಾಲಕ್ಕೆ ಪ್ರವೇಶಕ್ಕಾಗಿ ಆ ಕೋರ್ಸಿಗೆ ಒದಗಿಸಿರುವ ಸೀಟುಗಳ ಸಂಖ್ಯೆ.

(ಬಿ) ಯಾವುದೇ ವಿಶ್ವವಿದ್ಯಾಲಯ ಅಥವಾ ಇತರ ಶೈಕ್ಷಣಿಕ ಸಂಸ್ಥೆಯ ಸಂಬಂಧದಲ್ಲಿ "ಸ್ಥಳೀಯ ಪ್ರದೇಶ" ಎಂದರೆ, ಅಂಥ ವಿಶ್ವವಿದ್ಯಾಲಯಕ್ಕೆ ಅಥವಾ ಇತರ ಶೈಕ್ಷಣಿಕ ಸಂಸ್ಥೆಗೆ ಪ್ರವೇಶದ ಉದ್ದೇಶಗಳಿಗಾಗಿ ಈ ಆದೇಶದ 3ನೇ ಕಂಡಿಕೆಯಲ್ಲಿ ನಿರ್ದಿಷ್ಟಪಡಿಸಿದ ಹೈದ್ರಾಬಾದ್–ಕರ್ನಾಟಕ ಪ್ರದೇಶದ ಭಾಗ.

(ಸಿ) ಸ್ಥಳೀಯ ಪ್ರದೇಶದ ಸಂಬಂಧದಲ್ಲಿ "ಸ್ಥಳೀಯ ವ್ಯಕ್ತಿ" ಎಂದರೆ, ಸ್ಥಳೀಯ ಪ್ರದೇಶದ ಸಂಬಂಧದಲ್ಲಿ ಸ್ಥಳೀಯನೆಂದು ಈ ಆದೇಶದ 4ನೇ ಕಂಡಿಕೆಯ ಅಡಿಯಲ್ಲಿ ಅರ್ಹವಿರುವ ವ್ಯಕ್ತಿ.

(ಡಿ) "ಅನುಸೂಚಿ" ಎಂದರೆ ಈ ಆದೇಶಕ್ಕೆ ಲಗತ್ತಾದ ಅನುಸೂಚಿ.

(ಇ) "ರಾಜ್ಯಸರ್ಕಾರ" ಎಂದರೆ ಕರ್ನಾಟಕ ಸರ್ಕಾರ.

(ಎಫ್) "ಪ್ರದೇಶ" ಎಂದರೆ ಈ ಆದೇಶದ 3ನೇ ಕಂಡಿಕೆಯಲ್ಲಿ ನಿರ್ದಿಷ್ಟಪಡಿಸಿದ ಸ್ಥಳೀಯ ಪ್ರದೇಶವನ್ನು ಒಳಗೊಂಡ ಹೈದ್ರಾಬಾದ್–ಕರ್ನಾಟಕ ಪ್ರದೇಶ.

(ಜಿ) "ರಾಜ್ಯ–ವಾರು ಶೈಕ್ಷಣಿಕ ಸಂಸ್ಥೆ" ಎಂದರೆ, ಎರಡನೇ ಅನುಸೂಚಿಯ ಭಾಗ–II ರಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ಕೋರ್ಸುಗಳನ್ನು ಒದಗಿಸುವ ಶೈಕ್ಷಣಿಕ ಸಂಸ್ಥೆ.

(ಹೆಚ್) "ರಾಜ್ಯ–ವಾರು ವಿಶ್ವವಿದ್ಯಾಲಯ" ಎಂದರೆ, ಎರಡನೇ ಅನುಸೂಚಿಯ ಭಾಗ–I ರಲ್ಲಿ ನಿರ್ದಿಷ್ಟಪಡಿಸಲಾದ ವಿಶ್ವವಿದ್ಯಾಲಯ.

(ಐ) ಈ ಅಧಿಸೂಚನೆಯಲ್ಲಿ "ಅಧಿನಿವಾಸಿ" ಎಂದರೆ, 4ನೇ ಕಂಡಿಕೆಯಲ್ಲಿ ಪರಿಬಾಷಿಸಲಾದಂತೆ, "ಸ್ಥಳೀಯ ವ್ಯಕ್ತಿಗಳು".

(2) ಸಾಮಾನ್ಯ ಖಂಡಗಳ ಅಧಿನಿಯಮ, 1897 (1897ರ ಕೇಂದ್ರ ಅಧಿನಿಯಮ 10) ಈ ಆದೇಶದ ಅರ್ಥವಿವರಣೆಗಾಗಿ ಅನ್ವಯವಾಗತಕ್ಕದ್ದು.

**3. ಸ್ಥಳೀಯ ಪ್ರದೇಶ.–** ರಾಜ್ಯ ಸರ್ಕಾರದ ನಿಯಂತ್ರಣಕ್ಕೊಳಪಟ್ಟು ಮತ್ತು ಆ ಪ್ರದೇಶದಲ್ಲಿ ಇರುವ ವಿಶ್ವವಿದ್ಯಾಲಯಕ್ಕೆ ಮತ್ತು ವೃತ್ತಿ ತರಬೇತಿ ಸಂಸ್ಥೆಗಳನ್ನು ಒಳಗೊಂಡಂತೆ ಯಾವುದೇ ಇತರ ಶೈಕ್ಷಣಿಕ ಸಂಸ್ಥೆಗೆ (ರಾಜ್ಯವ್ಯಾಪಿ ವಿಶ್ವವಿದ್ಯಾಲಯ ಅಥವಾ ರಾಜ್ಯವ್ಯಾಪಿ ಶೈಕ್ಷಣಿಕ ಸಂಸ್ಥೆಗಳನ್ನು ಹೊರತುಪಡಿಸಿ) ಪ್ರವೇಶದ ಉದ್ದೇಶಕ್ಕಾಗಿ ಬೀದರ್, ಗುಲ್ಬರ್ಗಾ, ಯಾದಗಿರಿ, ರಾಯಚೂರು, ಕೊಪ್ಪಳ ಮತ್ತು ಬಳ್ಳಾರಿ ಜಿಲ್ಲೆಗಳನ್ನು ಒಳಗೊಂಡ ಹೈದ್ರಾಬಾದ್–ಕರ್ನಾಟಕ ಪ್ರದೇಶವೆಂದು ಕರೆಯಲಾಗುವ ರಾಜ್ಯದ ಭಾಗವನ್ನು ಸ್ಥಳೀಯ ಪ್ರದೇಶವೆಂದು ಪರಿಗಣಿಸತಕ್ಕದ್ದು.

**4. ಅಧಿನಿವಾಸಿ (ಸ್ಥಳೀಯ ವ್ಯಕ್ತಿಗಳು)–** ಯಾವುದೇ ಅಧ್ಯಯನ ಕೋರ್ಸ್‌ಗೆ ಪ್ರವೇಶ ಕೋರುವ ಅಭ್ಯರ್ಥಿಯನ್ನು,–

(ಎ) 1.1.2013ಕ್ಕೆ ಮೊದಲು ಅವನು ಸ್ಥಳೀಯ ಪ್ರದೇಶದಲ್ಲಿ ಹುಟ್ಟಿದ್ದರೆ, ಅಥವಾ ಅವನ ತಂದೆತಾಯಿಗಳು ಆ ಪ್ರದೇಶದಲ್ಲಿ ಹುಟ್ಟಿದ್ದರೆ, ಅಥವಾ ಅವನ ತಂದೆ ತಾಯಿಗಳು ಸಾಮಾನ್ಯವಾಗಿ 1.1.2013ಕ್ಕೆ ಮೊದಲು ಹತ್ತು ವರ್ಷಗಳಿಗಿಂತ ಕಡಿಮೆಯಿರದ ಅವಧಿವರೆಗೆ ಸ್ಥಳೀಯ ಪ್ರದೇಶದಲ್ಲಿ ವಾಸವಾಗಿದ್ದರೆ, ಮತ್ತು ಅವರ ಹೆಸರು ಮತದಾರರ ಪಟ್ಟಿಯಲ್ಲಾಗಲಿ ಅಥವಾ ಪಡಿತರ ಚೀಟಿಯಲ್ಲಾಗಲಿ ಇದ್ದರೆ; ಅಥವಾ ಸ್ಥಳೀಯ ಪ್ರದೇಶದಲ್ಲಿ 1.1.2013 ರಂದು ಅಥವಾ ಮೊದಲು ಯಾವುದೇ ಸ್ಥಿರಾಸ್ತಿಯನ್ನು ಹೊಂದಿದ್ದರೆ; ಅಥವಾ

(ಬಿ) ಕನಿಷ್ಠ ಶೈಕ್ಷಣಿಕ ವಿದ್ಯಾರ್ಹತೆಯನ್ನು ಗೊತ್ತುಪಡಿಸಲಾಗಿದ್ದ ಸಂದರ್ಭಗಳಲ್ಲಿ ಪ್ರವೇಶಾತಿಗಾಗಿ,–

(i) ಯಾವ ಶೈಕ್ಷಣಿಕ ವರ್ಷದಲ್ಲಿ ಅವನು ಹಾಜರಾಗಿದ್ದನೋ ಅಥವಾ ಸಂದರ್ಭಾನುಸಾರ ಸಂಬಂಧಪಟ್ಟ ಅರ್ಹತಾ ಪರೀಕ್ಷೆಗೆ ಮೊದಲು ಹಾಜರಾಗಿದ್ದನೋ ಆ ಶೈಕ್ಷಣಿಕ ವರ್ಷಕ್ಕೆ ಮುಕ್ತಾಯವಾಗುವ ಹತ್ತು ಕ್ರಮಾನುಗತ ಶೈಕ್ಷಣಿಕ ವರ್ಷಗಳಿಗಿಂತ ಕಡಿಮೆಯಿರದ ಅವಧಿಯವರೆಗೆ ಅಂಥ ಸ್ಥಳೀಯ ಪ್ರದೇಶದಲ್ಲಿರುವ ಶೈಕ್ಷಣಿಕ ಸಂಸ್ಥೆ ಅಥವಾ ಶೈಕ್ಷಣಿಕ ಸಂಸ್ಥೆಗಳಲ್ಲಿ ಅವನು ಅಧ್ಯಯನ ಮಾಡಿರಬೇಕು; ಅಥವಾ

(ii) ಅವನು ಯಾವ ಶೈಕ್ಷಣಿಕ ವರ್ಷದಲ್ಲಿ ಹಾಜರಾಗಿದ್ದನೋ ಅಥವಾ ಸಂದರ್ಭಾನುಸಾರ ಸಂಬಂಧಪಟ್ಟ ಅರ್ಹತಾ ಪರೀಕ್ಷೆಗೆ ಮೊದಲು ಹಾಜರಾಗಿದ್ದನೋ ಆ ಶೈಕ್ಷಣಿಕ ವರ್ಷಕ್ಕೆ ಮುಕ್ತಾಯವಾಗುವ ಹತ್ತು ಕ್ರಮಾನುಗತ ಶೈಕ್ಷಣಿಕ ವರ್ಷಗಳ ಇಡೀ ಅಥವಾ ಯಾವುದೇ ಭಾಗದ ಅವಧಿಯಲ್ಲಿ ಅವನು ಶೈಕ್ಷಣಿಕ ಸಂಸ್ಥೆಯಲ್ಲಿ ಅಧ್ಯಯನ ಮಾಡದಿದ್ದರೆ ಅವನು ಯಾವ ಅರ್ಹತಾ ಪರೀಕ್ಷೆಗೆ ಹಾಜರಾಗಿದ್ದನೋ ಅಥವಾ ಸಂದರ್ಭಾನುಸಾರ ಮೊದಲು ಹಾಜರಾಗಿದ್ದನೋ ಆ ಅರ್ಹತಾ ಪರೀಕ್ಷೆಯು ಪ್ರಾರಂಭವಾದ ದಿನಾಂಕದಿಂದ ನಿಕಟಪೂರ್ವದ ಹತ್ತು ವರ್ಷಗಳಿಗಿಂತ ಕಡಿಮೆಯಿರದ ಅವಧಿವರೆಗೆ ಆ ಸ್ಥಳೀಯ ಪ್ರದೇಶದಲ್ಲಿ ಅವನು ವಾಸವಾಗಿರಬೇಕು; ಅಥವಾ

(iii) ಅವನ ತಂದೆ ತಾಯಿಗಳಲ್ಲಿ ಯಾರೊಬ್ಬರು ಹತ್ತು ಕ್ರಮಾನುಗತ ಶೈಕ್ಷಣಿಕ ವರ್ಷಗಳ ಅವಧಿಗಾಗಿ ಅಂಥ ಸ್ಥಳೀಯ ಪ್ರದೇಶದಲ್ಲಿನ ಶೈಕ್ಷಣಿಕ ಸಂಸ್ಥೆಯಲ್ಲಿ ಅಧ್ಯಯನ ಮಾಡಿರಬೇಕು.

(ಸಿ) ಕನಿಷ್ಠ ಶೈಕ್ಷಣಿಕ ವಿದ್ಯಾರ್ಹತೆಯನ್ನು, ಪ್ರವೇಶಾತಿಗೆ ಗೊತ್ತುಪಡಿಸದಿದ್ದ ಸಂದರ್ಭದಲ್ಲಿ, ಅವನ ಅಥವಾ ಅವನ ತಂದೆ ತಾಯಿಗಳಲ್ಲಿ ಯಾರೊಬ್ಬರು ಯಾವ ದಿನಾಂಕಕ್ಕೆ ಆ ಸ್ಥಾನವನ್ನು ಪ್ರವೇಶಾತಿಗೆ ಅಧಿಸೂಚಿಸಲಾಗಿದೆಯೋ ಆ ದಿನಾಂಕದ ನಿಕಟ ಪೂರ್ವದ ಹತ್ತು ವರ್ಷಗಳಿಗಿಂತ ಕಡಿಮೆಯಿರದ ಅವಧಿವರೆಗೆ ಆ ಸ್ಥಳೀಯ ಪ್ರದೇಶದಲ್ಲಿ ವಾಸವಾಗಿರಬೇಕು; ಮತ್ತು

(ಡಿ) ಮಹಿಳೆಯ ಸಂದರ್ಭದಲ್ಲಿ, ಮೇಲಿನ (ಎ) ಯಿಂದ (ಸಿ) ವರೆಗಿನ ಖಂಡಗಳಲ್ಲಿ ನಿರ್ದಿಷ್ಟಪಡಿಸಲಾದ ಸ್ಥಳೀಯ ವ್ಯಕ್ತಿಯನ್ನು ಆಕೆಯು ವಿವಾಹವಾಗಿದ್ದರೆ,

–ಸ್ಥಳೀಯ ಪ್ರದೇಶಕ್ಕೆ ಸಂಬಂಧಿಸಿದ ಸ್ಥಳೀಯ ವ್ಯಕ್ತಿಯೆಂದು ಭಾವಿಸತಕ್ಕದ್ದು.

**ವಿವರಣೆ.**– ಈ ಕಂಡಿಕೆಯ ಉದ್ದೇಶಗಳಿಗಾಗಿ.–

(i) **"ಶೈಕ್ಷಣಿಕ ಸಂಸ್ಥೆ"** ಎಂದರೆ ರಾಜ್ಯ ಸರ್ಕಾರದಿಂದ ಮಾನ್ಯತೆ ಪಡೆದ ವಿಶ್ವವಿದ್ಯಾಲಯ ಅಥವಾ ಯಾವುದೇ ಶೈಕ್ಷಣಿಕ ಸಂಸ್ಥೆ, ವಿಶ್ವವಿದ್ಯಾಲಯ ಅಥವಾ ಇತರ ಸಕ್ಷಮ ಪ್ರಾಧಿಕಾರ;

(ii) ಅಧ್ಯಯನದ ಯಾವುದೇ ಕೋರ್ಸಿನ ಪ್ರವೇಶಕ್ಕೆ ಸಂಬಂಧಿಸಿದಂತೆ **"ಸಂಬಂಧಪಟ್ಟ ಅರ್ಹತಾ ಪರೀಕ್ಷೆ"** ಎಂದರೆ, ಅಂಥ ಅಧ್ಯಯನದ ಕೋರ್ಸಿಗೆ ಪ್ರವೇಶ ಪಡೆಯಲು ಉತ್ತೀರ್ಣರಾಗಬೇಕಾದ ಕನಿಷ್ಠ ಶೈಕ್ಷಣಿಕ ಅರ್ಹತಾ ಪರೀಕ್ಷೆ.

(iii) ಅಭ್ಯರ್ಥಿ ಅಥವಾ ಆತನ ತಂದೆ–ತಾಯಿ, ಈ ಕೆಳಗಿನ ಅವಧಿಯಲ್ಲಿ ಅಧ್ಯಯನ ಮಾಡಿದ ಕ್ರಮಾನುಗತ ಶೈಕ್ಷಣಿಕ ವರ್ಷಗಳನ್ನು ಪರಿಗಣನೆಗೆ ತೆಗೆದುಕೊಂಡು,–

(ಎ) ಆತನು, ಯಾವುದೇ ಪರೀಕ್ಷೆಯಲ್ಲಿ ಉತ್ತೀರ್ಣನಾಗಲು ವಿಫಲನಾದ ಕಾರಣಗಳಿಂದಾಗಿ ಆತನ ಅಧ್ಯಯನಕ್ಕೆ ಅಡಚಣೆಯಾದ ಯಾವುದೇ ಅವಧಿ; ಮತ್ತು

(ಬಿ) ರಾಜ್ಯವ್ಯಾಪಿ ವಿಶ್ವವಿದ್ಯಾಲಯ ಅಥವಾ ರಾಜ್ಯವ್ಯಾಪಿ ಶೈಕ್ಷಣಿಕ ಸಂಸ್ಥೆಯಲ್ಲಿ ಅವನು ಅಧ್ಯಯನ ಮಾಡಿದ ಯಾವುದೇ ಅವಧಿಯನ್ನು ಪರಿಗಣಿಸದೆ ಇರತಕ್ಕದ್ದಲ್ಲ.

(iv) ಯಾವುದೇ ಕೋರ್ಸಿನ ಅಧ್ಯಯನದ ಪ್ರವೇಶಾತಿಗಾಗಿ ಯಾವೊಬ್ಬ ಅಭ್ಯರ್ಥಿಯು, ಸ್ಥಳೀಯ ಪ್ರದೇಶದಲ್ಲಿ ವಾಸವಿರುವನೇ ಎಂಬ ಪ್ರಶ್ನೆಯನ್ನು, ಅಭ್ಯರ್ಥಿ ಅಥವಾ ಆತನ ತಂದೆ–ತಾಯಿ ವಾಸ್ತವವಾಗಿ ವಾಸಿಸುತ್ತಿದ್ದ ಸ್ಥಳಗಳಿಗೆ ಸಂಬಂಧಿಸಿ, ನಿರ್ಧರಿಸತಕ್ಕದ್ದು.

**5. ಪ್ರಮಾಣ ಪತ್ರಗಳನ್ನು ನೀಡಲು ಸಕ್ಷಮ ಪ್ರಾಧಿಕಾರ.**– (1) ಸರ್ಕಾರವು, ಸ್ಥಳೀಯ ವ್ಯಕ್ತಿಗಳಿಗೆ ಅರ್ಹತಾ ಪ್ರಮಾಣ ಪತ್ರಗಳನ್ನು ನೀಡಲು ಸಕ್ಷಮ ಪ್ರಾಧಿಕಾರವನ್ನು ಅಧಿಸೂಚಿಸಬಹುದು. ಸಕ್ಷಮ ಪ್ರಾಧಿಕಾರವು ಯುಕ್ತ ವಿಚಾರಣೆಯನ್ನು ನಡೆಸಿದ ನಂತರ ಅರ್ಹತಾ ಪ್ರಮಾಣಪತ್ರಗಳನ್ನು ನೀಡಲು ನಿಯಮಿಸಬಹುದಾದಂಥ ರೀತಿಯಲ್ಲಿ ನೋಟೀಸನ್ನು ಪ್ರಕಟಿಸಬಹುದು.

(2) ಸಕ್ಷಮ ಪ್ರಾಧಿಕಾರದ ಆದೇಶದಿಂದ ಬಾಧಿತನಾದ ಯಾವೊಬ್ಬ ವ್ಯಕ್ತಿಯು (ಸಾರ್ವಜನಿಕ ಸದಸ್ಯ ಅಥವಾ ಅಭ್ಯರ್ಥಿ) ಅಂಥ ಅರ್ಹತಾ ಪ್ರಮಾಣಪತ್ರವನ್ನು ನೀಡಿದ ಮೂವತ್ತು ದಿನಗಳೊಳಗೆ ಜಿಲ್ಲಾಧಿಕಾರಿಗೆ ಅಥವಾ ಸರ್ಕಾರವು ಅಧಿಸೂಚಿಸಿದ ಯಾವೊಬ್ಬ ಇತರ ಮೇಲ್ಮನವಿ ಪ್ರಾಧಿಕಾರಿಗೆ ಮೇಲ್ಮನವಿಯನ್ನು ಸಲ್ಲಿಸಬಹುದು.

(3) ಸಕ್ಷಮ ಪ್ರಾಧಿಕಾರ ಮತ್ತು ಮೇಲ್ಮನವಿ ಪ್ರಾಧಿಕಾರವು ಅವುಗಳನ್ನು ಸ್ವೀಕರಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗೆ ಅರ್ಜಿ ಅಥವಾ ಮೇಲ್ಮನವಿಯನ್ನು ವಿಲೇ ಮಾಡತಕ್ಕದ್ದು.

(4) ಅಧಿವಾಸವನ್ನು ರುಜುವಾತುಪಡಿಸಲು ಅಗತ್ಯಪಡಿಸಲಾದ 'ಜನನ ಪ್ರಮಾಣ ಪತ್ರ' ವನ್ನು ರಾಜ್ಯ ಸರ್ಕಾರವು ಗೊತ್ತುಪಡಿಸಿದ ರೀತಿಯಲ್ಲಿ ನೀಡತಕ್ಕದ್ದು.

(5) ಸರ್ಕಾರವು, ಅಧಿವಾಸದ ರುಜುವಾತಿಗಾಗಿ ಸಿಂಧುತ್ವ ಪ್ರಮಾಣಪತ್ರವನ್ನು ನೀಡುವ ಪ್ರಕ್ರಿಯೆಯನ್ನು ರೂಪಿಸತಕ್ಕದ್ದು.

**6. ಪ್ರಾದೇಶಿಕ ವಿಶ್ವವಿದ್ಯಾಲಯಗಳು ಮತ್ತು ಶೈಕ್ಷಣಿಕ ಸಂಸ್ಥೆಗಳಲ್ಲಿ ಮೀಸಲಾತಿ.**– (1) ಸ್ಥಳೀಯ ಪ್ರದೇಶದಲ್ಲಿರುವ ಒಂದನೇ ಅನುಸೂಚಿಯಲ್ಲಿ ಉಲ್ಲೇಖಿಸಲಾದ ಯಾವುದೇ ಪ್ರಾದೇಶಿಕ ವಿಶ್ವವಿದ್ಯಾಲಯ ಅಥವಾ ಶೈಕ್ಷಣಿಕ ಸಂಸ್ಥೆಯಲ್ಲಿನ ಅಧ್ಯಯನದ ಪ್ರತಿಯೊಂದು ಕೋರ್ಸಿನಲ್ಲಿ ಲಭ್ಯವಿರುವ ಸ್ಥಾನಗಳ ಶೇಕಡಾ ಎಪ್ಪತ್ತರಷ್ಟು ಪ್ರವೇಶಾತಿಯನ್ನು, ಅಂಥ ವಿಶ್ವವಿದ್ಯಾಲಯ ಅಥವಾ ಶೈಕ್ಷಣಿಕ ಸಂಸ್ಥೆಗೆ ಸಂಬಂಧಿಸಿದ ಸ್ಥಳೀಯ ವ್ಯಕ್ತಿಗಳಿಗೆ ಮೀಸಲಿರಿಸತಕ್ಕದ್ದು.

(2) (1)ನೇ ಉಪ–ಕಂಡಿಕೆಯ ಅಡಿಯಲ್ಲಿ ಸ್ಥಳೀಯ ವ್ಯಕ್ತಿಗಳಿಗೆ ಮೀಸಲಿರಿಸಬೇಕಾದ ಸ್ಥಾನಗಳ ಸಂಖ್ಯೆಯನ್ನು ನಿರ್ಧರಿಸುವಾಗ, ಸ್ಥಾನದ ಯಾವುದೇ ಅಪೂರ್ಣಾಂಕವನ್ನು ಒಂದು ಎಂದು ಲೆಕ್ಕಹಾಕತಕ್ಕದ್ದು:

ಪರಂತು, ಕನಿಷ್ಠ ಪಕ್ಷ ಒಂದು ಮೀಸಲು ಸ್ಥಾನವನ್ನು ಇಡತಕ್ಕದ್ದು.

**7. ರಾಜ್ಯವಾರು ವಿಶ್ವವಿದ್ಯಾಲಯಗಳು ಮತ್ತು ರಾಜ್ಯವಾರು ಶೈಕ್ಷಣಿಕ ಸಂಸ್ಥೆಗಳಲ್ಲಿ ಮೀಸಲಾತಿ.–** (1) ಎರಡನೇ ಅನುಸೂಚಿಯಲ್ಲಿ ಉಲ್ಲೇಖಿಸಲಾದ ರಾಜ್ಯ–ವಾರು ವಿಶ್ವವಿದ್ಯಾಲಯ ಅಥವಾ ರಾಜ್ಯವಾರು ಶೈಕ್ಷಣಿಕ ಸಂಸ್ಥೆಯಲ್ಲಿ ಕಲ್ಪಿಸಲಾದ ಪ್ರತಿಯೊಂದು ಅಧ್ಯಯನದ ವ್ಯಾಸಂಗ ಕ್ರಮದಲ್ಲಿ ಲಭ್ಯವಿರುವ ಸ್ಥಾನಗಳಲ್ಲಿ ಶೇಕಡಾ ಎಂಟರಷ್ಟನ್ನು ಹೈದ್ರಾಬಾದ್–ಕರ್ನಾಟಕ ಪ್ರದೇಶದ ಸ್ಥಳೀಯ ಅಭ್ಯರ್ಥಿಗಳಿಗೆ ಹಂಚಿಕೆ ಮಾಡುವುದು.

(2) (1)ನೇ ಉಪ ಕಂಡಿಕೆಯ ಅಡಿಯಲ್ಲಿ, ಸ್ಥಳೀಯ ವ್ಯಕ್ತಿಗಳ ಪರವಾಗಿ ಮೀಸಲಿರಿಸಬೇಕಾದ ಸ್ಥಾನಗಳ ಸಂಖ್ಯೆಯನ್ನು ನಿರ್ಧರಿಸುವಾಗ, ಸ್ಥಾನಗಳ ಯಾವುದೇ ಅಪೂರ್ಣಾಂಕವನ್ನು ಒಂದು ಎಂದು ಲೆಕ್ಕಹಾಕತಕ್ಕದ್ದು:

ಪರಂತು, ಕನಿಷ್ಠ ಪಕ್ಷ ಒಂದು ಸ್ಥಾನವನ್ನು ಮೀಸಲಿರಿಸದೆ ಇರತಕ್ಕದ್ದು.

(3) (1)ನೇ ಉಪಕಂಡಿಕೆಯ ಅಡಿಯಲ್ಲಿ, ಸ್ಥಳೀಯ ಪ್ರದೇಶಕ್ಕೆ ಸಂಬಂಧಿಸಿದ ಸ್ಥಳೀಯ ವ್ಯಕ್ತಿಗಳಿಗೆ ಸೇರಿದ ಮೀಸಲು ಸ್ಥಾನಗಳನ್ನು ಹಂಚಿಕೆ ಮಾಡುವಾಗ, ಸ್ಥಾನದ ಅಪೂರ್ಣಾಂಕಗಳನ್ನು ಒಂದು ಎಂದು ಲೆಕ್ಕ ಹಾಕುವ ಮೂಲಕ ಹೆಚ್ಚಿನ ಅಪೂರ್ಣಾಂಕವನ್ನು ಸರಿಹೊಂದಿಸತಕ್ಕದ್ದು ಮತ್ತು, ಅಗತ್ಯವಿದ್ದರೆ, ಉಳಿದಿರುವ ಹೆಚ್ಚಿನ ಅಪೂರ್ಣಾಂಕಗಳನ್ನು ಸಹ ಮತ್ತೊಂದಕ್ಕೆ ಎಂದು ಸರಿ ಹೊಂದಿಸತಕ್ಕದ್ದು; ಮತ್ತು ಹಾಗೆ ಲೆಕ್ಕ ಹಾಕಬೇಕಾದ ಅಪೂರ್ಣಾಂಕವನ್ನು, ಸಮಾನವಾಗಿರುವ ಅಪೂರ್ಣಾಂಕಗಳ ಕಾರಣದಿಂದ ಆಯ್ಕೆ ಮಾಡಲು ಸಾಧ್ಯವಾಗದಿದ್ದಲ್ಲಿ, ಆಯ್ಕೆಯನ್ನು ಚೀಟಿ ಎತ್ತುವ ಮೂಲಕ ಆರಿಸತಕ್ಕದ್ದು:

ಪರಂತು, ಸ್ಥಳೀಯ ಪ್ರದೇಶದ ಸಂಬಂದದಲ್ಲಿ ಸ್ಥಳೀಯ ವ್ಯಕ್ತಿಗಳಿಗಾಗಿ ಹಂಚಿಕೆಯಾದ ಕನಿಷ್ಠ ಒಂದು ಸ್ಥಾನವು ಇರತಕ್ಕದ್ದು.

**8. ಮೀಸಲು ಖಾಲಿ ಸ್ಥಾನಗಳನ್ನು ತುಂಬುವುದು.–** ಸ್ಥಳೀಯ ಪ್ರದೇಶಕ್ಕೆ ಸಂಬಂಧಿಸಿದ ಸ್ಥಳೀಯ ವ್ಯಕ್ತಿಗಳಿಗೆ ಮೀಸಲಿಡಲಾದ ಅಥವಾ ಹಂಚಿಕೆ ಮಾಡಲಾದ ಯಾವುದೇ ಸ್ಥಾನಗಳನ್ನು ತುಂಬಲು ಸ್ಥಳೀಯ ಅಭ್ಯರ್ಥಿ ಲಭ್ಯವಾಗದಿದ್ದರೆ, ಅಂಥ ಸ್ಥಾನವನ್ನು ಅದನ್ನು ಮೀಸಲಿಡಲಾಗದಿದ್ದರೆ ಹೇಗೋ ಹಾಗೆ ಭರ್ತಿ ಮಾಡತಕ್ಕದ್ದು.

**9. ನಿರ್ದೇಶನಗಳನ್ನು ನೀಡಲು ಪ್ರಾಧಿಕೃತಗೊಳಿಸಲು ಅಧಿಕಾರ.–** (1) ರಾಜ್ಯಪಾಲರು, ಯಾವುದೇ ವಿಶ್ವವಿದ್ಯಾಲಯ ಅಥವಾ ರಾಜ್ಯ ಸರ್ಕಾರದ ನಿಯಂತ್ರಣಕ್ಕೊಳಪಟ್ಟ ಯಾವುದೇ ಇತರ ಶೈಕ್ಷಣಿಕ ಸಂಸ್ಥೆ ಮತ್ತು ವಿಶ್ವವಿದ್ಯಾಲಯ ಅಥವಾ ಇತರ ಶೈಕ್ಷಣಿಕ ಸಂಸ್ಥೆಗೆ ಈ ಆದೇಶವನ್ನು ಜಾರಿಗೆ ತರುವ ಉದ್ದೇಶಕ್ಕಾಗಿ ಅಗತ್ಯವೆನಿಸಬಹುದಾದಂಥ ಅಥವಾ ಯುಕ್ತವೆನಿಸುವಂಥ ನಿರ್ದೇಶನಗಳನ್ನು ಹೊರಡಿಸಲು ರಾಜ್ಯ ಸರ್ಕಾರವನ್ನು ಅಗತ್ಯಪಡಿಸಬಹುದು.

(2) ರಾಜ್ಯ ಸರ್ಕಾರವು, (1)ನೇ ಉಪ–ಕಂಡಿಕೆಯ ಮೇರೆಗೆ ಯಾವುದೇ ನಿರ್ದೇಶನಗಳನ್ನು ಹೊರಡಿಸುವ ಉದ್ದೇಶಕ್ಕಾಗಿ ಅಥವಾ ಉಪ–ಕಂಡಿಕೆಯ ಮೇರೆಗೆ ಹೊರಡಿಸಲಾದ ತನ್ನ ನಿರ್ದೇಶನಗಳನ್ನು ಪಾಲಿಸಲಾಗುತ್ತಿದೆಯೆಂಬುದನ್ನು ತಾನು ಮನದಟ್ಟು ಮಾಡಿಕೊಳ್ಳಲು, ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಮಾಹಿತಿ, ವರದಿ ಅಥವಾ ವಿವರಗಳನ್ನು ತಮಗೆ ಒದಗಿಸುವಂತೆ ವಿಶ್ವವಿದ್ಯಾಲಯ ಅಥವಾ ರಾಜ್ಯ ಸರ್ಕಾರದ ನಿಯಂತ್ರಣಕ್ಕೊಳಪಟ್ಟ ಯಾವುದೇ ಇತರ ಶೈಕ್ಷಣಿಕ ಸಂಸ್ಥೆಗಳನ್ನು ಲಿಖಿತದಲ್ಲಿ ಆದೇಶದ ಮೂಲಕ ಅಗತ್ಯಪಡಿಸಬಹುದು ಮತ್ತು ವಿಶ್ವವಿದ್ಯಾಲಯ ಅಥವಾ ಇತರ ಶೈಕ್ಷಣಿಕ ಸಂಸ್ಥೆಯು ಅಂಥ ಆದೇಶವನ್ನು ಪಾಲಿಸತಕ್ಕದ್ದು.

**10. ಆದೇಶವು, ಅಧ್ಯಾರೋಹಿ ಪರಿಣಾಮ ಹೊಂದುವುದು.–** ಈ ಆದೇಶದ ಉಪಬಂಧವು, ಯಾವುದೇ ವಿಶ್ವವಿದ್ಯಾಲಯ ಅಥವಾ ರಾಜ್ಯ ಸರ್ಕಾರದ ನಿಯಂತ್ರಣಕ್ಕೊಳಪಟ್ಟ ಯಾವುದೇ ವಿಶ್ವವಿದ್ಯಾಲಯ ಅಥವಾ ಯಾವುದೇ ಇತರ ಶೈಕ್ಷಣಿಕ ಸಂಸ್ಥೆಗೆ ಪ್ರವೇಶಾತಿಗಳಿಗೆ ಸಂಬಂಧಿಸಿದ ಯಾವುದೇ ಶಾಸನ, ಅಧ್ಯಾದೇಶ, ನಿಯಮ, ವಿನಿಯಮ ಅಥವಾ ಇತರ ಆದೇಶದಲ್ಲಿ (ಈ ಆದೇಶದ ಪ್ರಾರಂಭಕ್ಕೆ ಮೊದಲು ಮಾಡಿರಲಿ ಅಥವಾ ನಂತರ ಮಾಡಿರಲಿ) ಏನೇ ಒಳಗೊಂಡಿದ್ದರೂ, ಅಧ್ಯಾರೋಹಿ ಪರಿಣಾಮವನ್ನು ಹೊಂದಿರತಕ್ಕದ್ದು.

**11. ಸಂದೇಹಗಳ ನಿವಾರಣೆ.–** ತೊಂದರೆಗಳನ್ನು ನಿವಾರಿಸಲು, ಈ ಆದೇಶದಲ್ಲಿರುವುದು ಯಾವುದೂ, ಅಂಥ ಉಪಬಂಧಗಳು ಈ ಆದೇಶಕ್ಕೆ ಅಸಂಗತವಾಗದಿರುವಷ್ಟರಮಟ್ಟಿಗೆ ಮಹಿಳೆ, ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದ ನಾಗರಿಕ ವರ್ಗ, ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಪಂಗಡದವರನ್ನು ಯಾವುದೇ ವಿಶ್ವವಿದ್ಯಾಲಯ ಅಥವಾ ಇತರ ಶೈಕ್ಷಣಿಕ ಸಂಸ್ಥೆಗಳಿಗೆ ಪ್ರವೇಶಾತಿ ಮಾಡಿಕೊಳ್ಳುವ ವಿಷಯದಲ್ಲಿನ ಮೀಸಲಾತಿಗೆ ಸಂಬಂಧಿಸಿದಂತೆ, ರಾಜ್ಯ ಸರ್ಕಾರ ಅಥವಾ ಇತರ ಸಕ್ಷಮ ಪ್ರಾಧಿಕಾರವು ಮಾಡಲಾದ ಯಾವುದೇ ಉಪಬಂಧಗಳ (ಈ ಆದೇಶದ ಪ್ರಾರಂಭಕ್ಕೆ ಮೊದಲು ಮಾಡಿರಲಿ ಅಥವಾ ನಂತರ ಮಾಡಿರಲಿ) ಕಾರ್ಯಾಚರಣೆಗೆ ಬಾಧಕವಾಗತಕ್ಕದ್ದಲ್ಲವೆಂದು, ಈ ಮೂಲಕ ಘೋಷಿಸಲಾಗಿದೆ.

**12. ಅನುಸೂಚಿಯನ್ನು ತಿದ್ದುಪಡಿ ಮಾಡುವ ಅಧಿಕಾರ.–** ರಾಜ್ಯಸರ್ಕಾರವು, ಅನುಸೂಚಿಗಳಲ್ಲಿರುವ ಯಾವುದೇ ಬಾಬ್ತನ್ನು ಸೇರಿಸುವ ಅಥವಾ ತೆಗೆದುಹಾಕುವ ಅಥವಾ ತಿದ್ದುಪಡಿ ಮಾಡುವ ಅಧಿಕಾರವನ್ನು ಹೊಂದಿರತಕ್ಕದ್ದು.

## ಒಂದನೇ ಅನುಸೂಚಿ

**[ಕಂಡಿಕೆ 1(2) ನೋಡಿ]**

(ಎ) ಈ ವಿಶ್ವವಿದ್ಯಾಲಯಗಳು ಒದಗಿಸುವ ಸ್ನಾತಕೋತ್ತರದವರೆಗಿನ ಮತ್ತು ಅದನ್ನು ಒಳಗೊಂಡ ಎಲ್ಲಾ ಕೋರ್ಸುಗಳು ಮತ್ತು ಮುಂದಿನ ಸರ್ಕಾರಿ(ಭಾರತ ಸರ್ಕಾರ ಮತ್ತು ಕರ್ನಾಟಕ ಸರ್ಕಾರ), ಖಾಸಗಿ(ಹಂಚಿಕೆಗಾಗಿ ಸರ್ಕಾರಕ್ಕೆ ನೀಡಲಾದ ಸೀಟುಗಳು) ಮತ್ತು ಇತರ ವಿಶ್ವವಿದ್ಯಾಲಯಗಳಿಗೆ ಸಂಯೋಜನೆಗೊಂಡ ಶೈಕ್ಷಣಿಕ ಸಂಸ್ಥೆಗಳ ಮೂಲಕ ಒದಗಿಸಲಾಗುವ ಶಿಕ್ಷಣದ ಪದವಿ ಕೋರ್ಸು, ಎಂದರೆ:–

(1) ಶ್ರೀ ಕೃಷ್ಣದೇವರಾಯ ವಿಶ್ವವಿದ್ಯಾಲಯ, ಬಳ್ಳಾರಿ;

(2) ಗುಲ್ಬರ್ಗಾ ವಿಶ್ವವಿದ್ಯಾಲಯ;

(3) ಇತರ ಸರ್ಕಾರಿವಲಯ, ಪಿ.ಪಿ.ಪಿ., ಯಾವುದೇ ಇತರ ಮಾದರಿಯಲ್ಲಿ ಸೃಜಿಸಬಹುದಾದಂತಹ ಪರಿಗಣಿತ ವಿಶ್ವವಿದ್ಯಾಲಯಗಳು ಒಳಗೊಂಡಿರುವ ಯಾವುದೆ ಇತರ ವಿಶ್ವವಿದ್ಯಾಲಯ.

(ಬಿ) ಕಾರ್ಮಿಕ ಮಂತ್ರಾಲಯ ಅಥವಾ ಯಾವುದೇ ಇತರ ಇಲಾಖೆ ಅಥವಾ ಕೈಗಾರಿಕಾ ತರಬೇತಿ ಕೇಂದ್ರಗಳ ಮತ್ತು ಪಾಲಿಟೆಕ್ನಿಕ್‌ಗಳ ಮೂಲಕ ಅಥವಾ ಯಾವುದೇ ಖಾಸಗಿ (ಹಂಚಿಕೆಗಾಗಿ ಸರ್ಕಾರಕ್ಕೆ ನೀಡಲಾದ ಸೀಟುಗಳು) ಅಥವಾ ಅನುದಾನಿತ ಸಂಸ್ಥೆಗಳ ಮೂಲಕ ಒದಗಿಸಲಾಗುವ ವೃತ್ತಿ ತಾಂತ್ರಿಕ ಕೋರ್ಸುಗಳು.

(ಸಿ) ಸರ್ಕಾರಿ, ಬೆಂಬಲಿತ ಅಥವಾ ಖಾಸಗಿ (ಹಂಚಿಕೆಗಾಗಿ ಸರ್ಕಾರಕ್ಕೆ ನೀಡಲಾದ ಸೀಟುಗಳು) ಪ್ರಾದೇಶಿಕ ವಿಶ್ವವಿದ್ಯಾಲಯ ಅಥವಾ ಶೈಕ್ಷಣಿಕ ಸಂಸ್ಥೆ ಎಂದು ರಾಜ್ಯ ಸರ್ಕಾರವು ಅಧಿಸೂಚಿಸಿದ ಪ್ರದೇಶದಲ್ಲಿನ ಯಾವುದೇ ಇತರ ವಿಶ್ವವಿದ್ಯಾಲಯ, ಭಾವಿತ ವಿಶ್ವವಿದ್ಯಾಲಯ ಅಥವಾ ಶೈಕ್ಷಣಿಕ ಸಂಸ್ಥೆ ಅಥವಾ ವೃತ್ತಿ ತರಬೇತಿ ಸಂಸ್ಥೆ.

(ಡಿ) ಆ ಪ್ರದೇಶದಲ್ಲಿನ ಎಲ್ಲಾ ಖಾಸಗಿ(ಹಂಚಿಕೆಗಾಗಿ ಸರ್ಕಾರಕ್ಕೆ ನೀಡಲಾದ ಸೀಟುಗಳು), ಸರ್ಕಾರಿ ಮತ್ತು ಬೆಂಬಲಿತ ವೈದ್ಯಕೀಯ ಕಾಲೇಜುಗಳು, ದಂತ ವೈದ್ಯಕೀಯ ಕಾಲೇಜುಗಳು, ಎಂಜಿನಿಯರಿಂಗ್ ಕಾಲೇಜುಗಳು ಅಥವಾ ಯಾವುದೇ ತಾಂತ್ರಿಕ, ವೃತ್ತಿಪರ, ವೃತ್ತಿ ಅಥವಾ ಉನ್ನತ ಶಿಕ್ಷಣ ಸಂಸ್ಥೆ.

## ಎರಡನೇ ಅನುಸೂಚಿ

**(ಕಂಡಿಕೆ 1(ಎಫ್)(ಜಿ) ನೋಡಿ)**

### ಭಾಗ–I

### ರಾಜ್ಯ ವ್ಯಾಪಿ ವಿಶ್ವವಿದ್ಯಾಲಯಗಳು

1. ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರು.
2. ಕೃಷಿ ವಿಜ್ಞಾನಗಳ ವಿಶ್ವವಿದ್ಯಾಲಯ, ಧಾರವಾಡ.
3. ರಾಜೀವ್ ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರು.
4. ವಿಶ್ವೇಶ್ವರಯ್ಯ ತಾಂತ್ರಿಕ ವಿಶ್ವವಿದ್ಯಾಲಯ, ಬೆಳಗಾವಿ.
5. ಕನ್ನಡ ವಿಶ್ವವಿದ್ಯಾಲಯ, ಹಂಪಿ.
6. ಮಹಿಳಾ ವಿಶ್ವವಿದ್ಯಾಲಯ, ಬಿಜಾಪುರ.
7. ಪಶುವೈದ್ಯಕೀಯ ವಿಶ್ವವಿದ್ಯಾಲಯ, ಬೀದರ್.
8. ಕೇಂದ್ರೀಯ ವಿಶ್ವವಿದ್ಯಾಲಯ, ಗುಲ್ಬರ್ಗಾ.
9. ರಾಜ್ಯ ಸರ್ಕಾರವು ಅಧಿಸೂಚಿಸಬಹುದಾದ ಯಾವುದೇ ಇತರ ವಿಶ್ವವಿದ್ಯಾಲಯ, ಪರಿಗಣಿತ ವಿಶ್ವವಿದ್ಯಾಲಯ ಇತ್ಯಾದಿಗಳು.
10. ತೋಟಗಾರಿಕೆ ವಿಶ್ವವಿದ್ಯಾಲಯ, ಬಾಗಲಕೋಟೆ.
11. ಪಶುವೈದ್ಯ ವಿಶ್ವವಿದ್ಯಾಲಯ, ಬೀದರ್.

### ಭಾಗ–II

### ರಾಜ್ಯವಾರು ಶೈಕ್ಷಣಿಕ ಸಂಸ್ಥೆಗಳು

ಈ ಮುಂದಿನ ಕೋರ್ಸುಗಳನ್ನು ನೀಡುವ ಮತ್ತು ಈ ಅನುಸೂಚಿಯ ಭಾಗ–I ರಲ್ಲಿ ಉಲ್ಲೇಖಿಸಲಾದ ರಾಜ್ಯವಾರು ವಿಶ್ವವಿದ್ಯಾಲಯದ ಮೂಲಕವಾಗಲಿ ಅಥವಾ ಮೊದಲನೇ ಅನುಸೂಚಿಯಲ್ಲಿ ಉಲ್ಲೇಖಿಸಲಾದ ರಾಜ್ಯವಾರೇತರ ವಿಶ್ವವಿದ್ಯಾಲಯದ ಮೂಲಕವಾಗಲಿ ಅಥವಾ ಪದವಿ ಪೂರ್ವ ಶಿಕ್ಷನ ಮಂಡಲಿ ಅಥವಾ ರಾಷ್ಟ್ರೀಯ ವೃತ್ತಿಪರ ತರಬೇತಿ ಪರಿಷತ್ತಿನ (NCVT) ಪಠ್ಯಕ್ರಮದ ಪ್ರಕಾರ ಕೋರ್ಸುಗಳನ್ನು ನೀಡುತ್ತಿರುವ ಕೈಗಾರಿಕಾ ತರಬೇತಿ ಸಂಸ್ಥೆ ಮೂಲಕವಾಗಲಿ ಸಂಯೋಜಿತವಾದ ಖಾಸಗಿ (ಹಂಚಿಕೆಗಾಗಿ ಸರ್ಕಾರಕ್ಕೆ ನೀಡಲಾದ ಸೀಟುಗಳು) ಅಥವಾ ಸಾರ್ವಜನಿಕ ಸಂಸ್ಥೆಗಳು.

1. ಇಂಜಿನಿಯರಿಂಗ್
2. ದಂತ ವೈದ್ಯಕೀಯ
3. ವೈದ್ಯಕೀಯ
4. ಔಷಧಿ ವೈದ್ಯಕೀಯ
5. ಫಿಜಿಯೋ ತೆರಪಿ
6. ನರ್ಸಿಂಗ್
7. ದೈಹಿಕ ಶಿಕ್ಷಣ
8. ಮ್ಯಾನೇಜ್‌ಮೆಂಟ್ ಅಥವಾ ಸರ್ಕಾರವು ಅಧಿಸೂಚಿಸುವ ಯಾವುದೇ ಇತರ ಕೋರ್ಸುಗಳು

9. ರಾಜ್ಯದ ರಾಜಧಾನಿಯಾದ ಬೆಂಗಳೂರಿನ ಪ್ರದೇಶದಲ್ಲಿ ವಿಶ್ವವಿದ್ಯಾಲಯ ಅನುದಾನ ಆಯೋಗ ಅಥವಾ ಅಖಿಲ ಭಾರತ ತಾಂತ್ರಿಕ ಶಿಕ್ಷಣ ಪರಿಷತ್ತು ಅಥವಾ ಭಾರತದ ವೈದ್ಯಕೀಯ ಪರಿಷತ್ತು ಮಾನ್ಯತೆ ನೀಡಿದ ಯಾವುದೇ ಇತರ ವಿಷಯವನ್ನು ಕಾಲೇಜು ಅಥವಾ ಸಂಸ್ಥೆ ಅಥವಾ ಭಾವಿತ ವಿಶ್ವವಿದ್ಯಾಲಯ

10. ಕರ್ನಾಟಕದಲ್ಲಿ ಮತ್ತು ಸರ್ಕಾರವು ಅಧಿಸೂಚಿಸಿದ ಎಲ್ಲಾ ಸಂಸ್ಥೆಗಳು ಬೋಧಿಸದೇ ಇರುವ ಯಾವುದೇ ಇತರ ವಿಷಯ/ವೃತ್ತಿಪರ ಕೋರ್ಸು

11. ಕರ್ನಾಟಕದಲ್ಲಿ ಮತ್ತು ಸರ್ಕಾರವು ಅಧಿಸೂಚಿಸಿದ ಎಲ್ಲಾ ಕೈಗಾರಿಕಾ ತರಬೇತಿ ಸಂಸ್ಥೆಗಳು ಬೋಧಿಸದೇ ಇರುವ ಯಾವುದೇ ವಾಣಿಜ್ಯ

12. ಸರ್ಕಾರವು ಅಧಿಸೂಚಿಸಿದ ಯಾವುದೇ ಇತರ ಸಂಸ್ಥೆ ಅಥವಾ ಅಧ್ಯಯನ ವಿಭಾಗ ಅಥವಾ ಅವೆರಡು.

**ಹೆಚ್.ಆರ್. ಭಾರದ್ವಾಜ್,**

ಕರ್ನಾಟಕ ರಾಜ್ಯಪಾಲರು

ಕರ್ನಾಟಕದ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಲ್.ಲೋಕನಾಥ**

**PR-50** ಸರ್ಕಾರದ ಜಂಟಿ ಕಾರ್ಯದರ್ಶಿ,

**SC-2000** (ಹೈದ್ರಾಬಾದ್–ಕರ್ನಾಟಕ ವಿಶೇಷ ಕೋಶ) ಸಿಅಸುಇ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಡಿಪಿಎಆರ್ 06 ಪಿಎಲ್ಎಕ್ಸ್ 2012 ಬೆಂಗಳೂರು, ದಿನಾಂಕ: 06.11.2013.**

**ರಾಜ್ಯಪಾಲರು ಅನುಮೋದಿಸಿರುವ ಈ ಮುಂದಿನ ಆದೇಶವನ್ನು ಸಾರ್ವಜನಿಕ ಮಾಹಿತಿಗಾಗಿ ಈ ಮೂಲಕ ಪ್ರಕಟಿಸಲಾಗಿದೆ:–**

**ಹೈದ್ರಾಬಾದ್–ಕರ್ನಾಟಕ ಪ್ರದೇಶ ಅಭಿವೃದ್ಧಿ ಮಂಡಲಿ ಆದೇಶ, 2013**

ಕರ್ನಾಟಕ (ಹೈದ್ರಾಬಾದ್–ಕರ್ನಾಟಕ ಪ್ರದೇಶಕ್ಕೆ ರಾಜ್ಯಪಾಲರ ವಿಶೇಷ ಹೊಣೆಗಾರಿಕೆ) ಆದೇಶ 2013ರ 2ನೇ ಖಂಡದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕದ ರಾಜ್ಯಪಾಲರು, ಈ ಮೂಲಕ, ಮುಂದಿನ ಆದೇಶವನ್ನು ಹೊರಡಿಸಿದ್ದಾರೆ, ಎಂದರೆ:–

**1. ಹೆಸರು ಮತ್ತು ಪ್ರಾರಂಭ.**– (1) ಈ ಆದೇಶವನ್ನು ಹೈದ್ರಾಬಾದ್–ಕರ್ನಾಟಕ ಪ್ರದೇಶ ಅಭಿವೃದ್ಧಿ ಮಂಡಲಿ ಆದೇಶ, 2013 ಎಂದು ಕರೆಯತಕ್ಕದ್ದು.

(2) ಇದು, ಸರ್ಕಾರಿ ರಾಜ್ಯಪತ್ರದಲ್ಲಿ ಅದರ ಪ್ರಕಟಣೆಯ ದಿನದಂದು ಜಾರಿಗೆ ಬರತಕ್ಕದ್ದು.

**2. ಪರಿಭಾಷೆಗಳು.**– ಈ ಆದೇಶದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) "ಮಂಡಲಿ" ಎಂದರೆ, 3ನೇ ಖಂಡದ ಅಡಿಯಲ್ಲಿ ರಚನೆಯಾದ ಹೈದ್ರಾಬಾದ್–ಕರ್ನಾಟಕ ಪ್ರದೇಶ ಅಭಿವೃದ್ಧಿ ಮಂಡಲಿ;

(ಬಿ) "ಅಧ್ಯಕ್ಷ" ಎಂದರೆ, ಮಂಡಳಿಯ ಅಧ್ಯಕ್ಷ;

(ಸಿ) "ಇಲಾಖೆ" ಎಂದರೆ, ರಾಜ್ಯ ಸರ್ಕಾರವು, ಆ ಪ್ರದೇಶದ ಮೇಲೆ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ, ಯಾವುದೇ ಕಾನೂನಿನ ಮೂಲಕ ಅಥವಾ ಅದರ ಅಡಿಯಲ್ಲಿ ಸ್ಥಾಪಿಸಿದ ಯಾವುದೇ ನಿಕಾಯ ಅಥವಾ ನಿಗಮವನ್ನೂ ಒಳಗೊಂಡಂತೆ, ಹೈದ್ರಾಬಾದ್–ಕರ್ನಾಟಕ ಪ್ರದೇಶದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ರಾಜ್ಯ ಸರ್ಕಾರದ ಎಲ್ಲಾ ಇಲಾಖೆಗಳು;

(ಡಿ) "ಅನುಷ್ಠಾನ ಸಮಿತಿ" ಎಂದರೆ, 17ನೇ ಖಂಡದ ಅಡಿಯಲ್ಲಿ ರಚಿಸಲಾದ ಅನುಷ್ಠಾನ ಸಮಿತಿ;

(ಇ) "ಹೈದ್ರಾಬಾದ್–ಕರ್ನಾಟಕ ಪ್ರದೇಶ" ಎಂದರೆ, ಬಳ್ಳಾರಿ, ಬೀದರ್, ಗುಲ್ಬರ್ಗಾ, ಯಾದಗಿರಿ, ರಾಯಚೂರು ಮತ್ತು ಕೊಪ್ಪಳದ ಕಂದಾಯ ಜಿಲ್ಲೆಗಳನ್ನು ಒಳಗೊಂಡ ಪ್ರದೇಶ;

(ಎಫ್) "ಸದಸ್ಯ" ಎಂದರೆ, ಮಂಡಲಿಯ ಸದಸ್ಯ;

(ಜಿ) "ಯೋಜನೆ" ಎಂದರೆ, ಜಿಲ್ಲಾ ಪಂಚಾಯತಿಯ ಯೋಜನೆ ಮತ್ತು ವಿವಿಧ ಅಭಿವೃದ್ಧಿ ಇಲಾಖೆಗಳ ಯೋಜನೆಯನ್ನು ಹೊರತುಪಡಿಸಿ, ಹೈದ್ರಾಬಾದ್–ಕರ್ನಾಟಕ ಪ್ರದೇಶದ ಅಭಿವೃದ್ಧಿಗಾಗಿ ಮಂಡಲಿಯು ಸಿದ್ಧಪಡಿಸಿದ ವಾರ್ಷಿಕ ಯೋಜನೆ;

(ಎಚ್) "ಗೊತ್ತುಪಡಿಸಲಾದುದು" ಎಂದರೆ, ರಾಜ್ಯಪಾಲರು ನಿಯಮಗಳ ಮೂಲಕ ಗೊತ್ತುಪಡಿಸಲಾದುದು;

(ಐ) "ಕಾರ್ಯದರ್ಶಿ" ಎಂದರೆ, ಮಂಡಲಿಯ ಕಾರ್ಯದರ್ಶಿ.

### ಅಧ್ಯಾಯ – II

**3. ಮಂಡಲಿಯ ರಚನೆ.**– (1) ರಾಜ್ಯ ಸರ್ಕಾರವು, ಈ ಆದೇಶವು ಪ್ರಾರಂಭವಾದ ತರುವಾಯ, ಆದಷ್ಟು ಬೇಗನೆ, ಈ ಆದೇಶದ ಉದ್ದೇಶಗಳಿಗಾಗಿ, ಗುಲ್ಬರ್ಗಾವನ್ನು ಕೇಂದ್ರಸ್ಥಾನವಾಗಿ ಹೊಂದಿರುವ, ಹೈದ್ರಾಬಾದ್–ಕರ್ನಾಟಕ ಪ್ರದೇಶಕ್ಕಾಗಿ, ಹೈದ್ರಾಬಾದ್–ಕರ್ನಾಟಕ ಪ್ರದೇಶ ಅಭಿವೃದ್ಧಿ ಮಂಡಲಿ ಎಂದು ಕರೆಯಲಾಗುವ, ಒಂದು ಮಂಡಲಿಯನ್ನು ರಚಿಸತಕ್ಕದ್ದು.

(2) ಪ್ರಾಧಿಕಾರವು, ಕರಾರು ಮಾಡಿಕೊಳ್ಳಲು ಸ್ಥಿರ ಮತ್ತು ಚರ ಸ್ವತ್ತುಗಳೆರಡನ್ನೂ ಆರ್ಜಿಸುವ, ಹೊಂದುವ ಮತ್ತು ವಿಲೆ ಮಾಡುವ ಅಧಿಕಾರದೊಂದಿಗೆ, ಶಾಶ್ವತ ಉತ್ತರಾಧಿಕಾರ ಮತ್ತು ಸಾಮಾನ್ಯ ಮೊಹರನ್ನು ಹೊಂದಿರುವ, ಮೇಲೆ ಹೇಳಿದ ಹೆಸರಿನ ಒಂದು ನಿಗಮಿತ ನಿಕಾಯವಾಗಿರತಕ್ಕದ್ದು ಮತ್ತು ಸದರಿ ಹೆಸರಿನಿಂದ ದಾವೆ ಹೂಡತಕ್ಕದ್ದು ಮತ್ತು ದಾವೆಗೊಳಗಾಗತಕ್ಕದ್ದು.

(3) ಮಂಡಲಿಯು ಈ ಮುಂದಿನ ಸದಸ್ಯರನ್ನು ಒಳಗೊಂಡಿರತಕ್ಕದ್ದು, ಎಂದರೆ:–

(ಎ) ಹೈದ್ರಾಬಾದ್–ಕರ್ನಾಟಕ ಪ್ರದೇಶದ ಎಲ್ಲಾ ಜಿಲ್ಲಾ ಉಸ್ತುವಾರಿ ಸಚಿವರುಗಳು ಸದಸ್ಯರಾಗಿರುತ್ತಾರೆ ಮತ್ತು ರಾಜ್ಯ ಸರ್ಕಾರವು ಆ ಪ್ರದೇಶದ ಜಿಲ್ಲಾ ಉಸ್ತುವಾರಿ ಸಚಿವರಲ್ಲಿ ಒಬ್ಬರನ್ನು ಅಧ್ಯಕ್ಷರೆಂದು ನಾಮ ನಿರ್ದೇಶಿಸತಕ್ಕದ್ದು;

(ಬಿ) ರಾಜ್ಯ ಸರ್ಕಾರವು ಒಂದು ವರ್ಷದ ಅವಧಿಗಾಗಿ ಸರದಿಯ ಮೂಲಕ ನಾಮನಿರ್ದೇಶಿಸಿ, ಆ ಪ್ರದೇಶವನ್ನು ಪ್ರತಿನಿಧಿಸುವ, ಕರ್ನಾಟಕ ವಿಧಾನಸಭೆಯ ಎಂಟು ಜನ ಸದಸ್ಯರು;

(ಬಿ1) ರಾಜ್ಯ ಸರ್ಕಾರವು ಒಂದು ವರ್ಷದ ಅವಧಿಗಾಗಿ ಸರದಿಯ ಮೂಲಕ ನಾಮ ನಿರ್ದೇಶಿಸಿದ, ಆ ಪ್ರದೇಶವನ್ನು ಪ್ರತಿನಿಧಿಸುವ, ಕರ್ನಾಟಕ ವಿಧಾನ ಪರಿಷತ್ತಿನ ಇಬ್ಬರು ಸದಸ್ಯರು;

(ಸಿ) ಮಂಡಲಿಯ ಅಧಿಕಾರ ವ್ಯಾಪ್ತಿಯೊಳಗೆ ಇರುವ ಚುನಾವಣಾ ಕ್ಷೇತ್ರಗಳ ಹೈದ್ರಾಬಾದ್–ಕರ್ನಾಟಕ ಪ್ರದೇಶದ ಭಾಗ ಅಥವಾ ಪೂರ್ಣವಾಗಿ ಪ್ರತಿನಿಧಿಸುವ ರಾಜ್ಯ ಸರ್ಕಾರವು ಒಂದು ವರ್ಷದ ಅವಧಿಗಾಗಿ ಸುತ್ತು ಸರದಿಯ ಮೂಲಕ ನಾಮನಿರ್ದೇಶಿಸುವ ಸಂಸತ್ತಿನ ಒಬ್ಬರು ಸದಸ್ಯರು;

(ಡಿ) ರಾಜ್ಯ ಸರ್ಕಾರವು, ಒಂದು ವರ್ಷದ ಅವಧಿಗಾಗಿ ಸುತ್ತು ಸರದಿಯ ಮೂಲಕ, ನಾಮನಿರ್ದೇಶನ ಮಾಡುವ ಬಳ್ಳಾರಿ, ಬೀದರ್, ಗುಲ್ಬರ್ಗಾ, ಯಾದಗಿರಿ ಕೊಪ್ಪಳ ಮತ್ತು ರಾಯಚೂರು ಜಿಲ್ಲೆಗಳ ಒಬ್ಬರು ಜಿಲ್ಲಾ ಪಂಚಾಯತಿಯ ಅಧ್ಯಕ್ಷರು;

(ಡಿ1) ರಾಜ್ಯ ಸರ್ಕಾರವು ಸುತ್ತು ಸರದಿಯ ಮೂಲಕ ಒಂದು ವರ್ಷದ ಅವಧಿಗಾಗಿ ನಾಮನಿರ್ದೇಶನ ಮಾಡಿದಂತೆ ಆ ಪ್ರದೇಶದೊಳಗೆ ಬರುವ ನಗರ, ಒಬ್ಬರು ಸ್ಥಳೀಯ ಸಂಸ್ಥೆಯ ಅಧ್ಯಕ್ಷ/ಮೇಯರ್.

(ಇ) ರಾಜ್ಯ ಸರ್ಕಾರವು ನಾಮನಿರ್ದೇಶನ ಮಾಡುವ ಮುಂದಿನ, ಎಂದರೆ:–

(1) ರಾಜ್ಯದ ಯೋಜನಾ ಕಾರ್ಯವಿಧಾನ;

(2) ರಾಜ್ಯದ ಹಣಕಾಸು ವಿಷಯಗಳು ಮತ್ತು ಲೆಕ್ಕಪತ್ರಗಳು;

(3) ನೀರಾವರಿ ಮತ್ತು ಲೋಕೋಪಯೋಗಿ ಕಾಮಗಾರಿಗಳು;

(4) ಕೃಷಿ ಮತ್ತು ಕೈಗಾರಿಕೆ; ಹಾಗೂ

(5) ಶಿಕ್ಷಣ ಮತ್ತು ಉದ್ಯೋಗ;

– ಈ ಕ್ಷೇತ್ರಗಳಲ್ಲಿ ತಜ್ಞರಾಗಿರುವ ಒಬ್ಬೊಬ್ಬರಂತೆ ಐವರು ಸದಸ್ಯರು.

| | |
|---|---|
| (ಎಫ್)ಗುಲ್ಬರ್ಗಾ ಕಂದಾಯ ಪ್ರದೇಶದ ಪ್ರಾದೇಶಿಕ ಕಮೀಷನರುಗಳು | – ಪದನಿಮಿತ್ತ ಸದಸ್ಯರು; |
| (ಜಿ) ಯೋಜನಾ ಇಲಾಖೆಯ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿ | – ಪದನಿಮಿತ್ತ ಸದಸ್ಯರು; |
| (ಎಚ್) ಆರ್ಥಿಕ ಇಲಾಖೆಯ ಪ್ರಭಾರದಲ್ಲಿರುವ ಸರ್ಕಾರದ ಕಾರ್ಯದರ್ಶಿ | –ಪದನಿಮಿತ್ತ ಸದಸ್ಯರು |
| (ಐ) ಮಂಡಲಿಯ ಕಾರ್ಯದರ್ಶಿ | – ಸದಸ್ಯ ಕಾರ್ಯದರ್ಶಿ |

(4) ರಾಜ್ಯ ಸರ್ಕಾರವು, ಸರ್ಕಾರದ ಕಾರ್ಯದರ್ಶಿ ದರ್ಜೆಗೆ ಕಡಿಮೆಯಲ್ಲದ ದರ್ಜೆಯ ಒಬ್ಬ ಅಧಿಕಾರಿಯನ್ನು, ಮಂಡಲಿಯ ಕಾರ್ಯದರ್ಶಿಯನ್ನಾಗಿ ನೇಮಕ ಮಾಡತಕ್ಕದ್ದು.

(5) ರಾಜ್ಯ ಸರ್ಕಾರವು, ಈ ಆದೇಶದ ಅಡಿಯಲ್ಲಿ, ಮಂಡಲಿಯ ಕರ್ತವ್ಯಗಳನ್ನು ನೆರವೇರಿಸುವುದಕ್ಕೆ ತಾನು ಅವಶ್ಯವೆಂದು ಪರಿಗಣಿಸುವ ಅಂಥ ಇತರ ಅಧಿಕಾರಿಗಳನ್ನು ಮತ್ತು ಸಿಬ್ಬಂದಿಯನ್ನು ಮಂಡಲಿಗೆ ಒದಗಿಸತಕ್ಕದ್ದು.

(6) ಮಂಡಲಿಯ ಕಾರ್ಯದರ್ಶಿಗೆ ಮತ್ತು ಇತರ ಅಧಿಕಾರಿಗಳು ಮತ್ತು ಸಿಬ್ಬಂದಿಗೆ ಸಂದಾಯ ಮಾಡಬೇಕಾದ ಸಂಬಳಗಳು, ಭತ್ಯೆಗಳು ಮತ್ತು ನಿವೃತ್ತಿ ವೇತನಗಳೂ ಒಳಗೊಂಡಂತೆ ಮಂಡಲಿಯ ಆಡಳಿತಾತ್ಮಕ ವೆಚ್ಚಗಳನ್ನು ಮಂಡಲಿಯ ನಿಧಿಯಿಂದ ಭರಿಸತಕ್ಕದ್ದು.

**4. ಸಲಹಾ ಪರಿಷತ್ತು.**– (1) ಈ ಮುಂದಿನವರುಗಳನ್ನು ಒಳಗೊಂಡ ಸಲಹಾ ಪರಿಷತ್ತು ಇರತಕ್ಕದ್ದು, ಎಂದರೆ:–

(ಎ) ಆ ಪ್ರದೇಶದ ಕಂದಾಯ ಜಿಲ್ಲೆಗಳ ಪ್ರಭಾರ ಹೊಂದಿರುವ ಜಿಲ್ಲಾ ಉಸ್ತುವಾರಿ ಸಚಿವರು;

(ಬಿ) ಆ ಪ್ರದೇಶವನ್ನು ಪ್ರತಿನಿಧಿಸುವ ಸಂಸತ್ತಿನ ಎಲ್ಲಾ ಸದಸ್ಯರು;

(ಸಿ) ಆ ಪ್ರದೇಶವನ್ನು ಪ್ರತಿನಿಧಿಸುವ ಕರ್ನಾಟಕ ರಾಜ್ಯ ವಿಧಾನಸಭೆಯ ಎಲ್ಲಾ ಸದಸ್ಯರು;

(ಡಿ) ಆ ಪ್ರದೇಶದಲ್ಲಿ ಮತದಾರನೆಂದು ಹೆಸರನ್ನು ನೋಂದಾಯಿಸಲಾದ ಕರ್ನಾಟಕ ರಾಜ್ಯ ವಿಧಾನಪರಿಷತ್ತಿನ ಎಲ್ಲಾ ಸದಸ್ಯರು;

(ಇ) ಆ ಪ್ರದೇಶವನ್ನು ಪ್ರತಿನಿಧಿಸುವ ಜಿಲ್ಲಾ ಪಂಚಾಯತಿಗಳ ಎಲ್ಲಾ ಅಧ್ಯಕ್ಷರು;

(ಎಫ್) ಗುಲ್ಬರ್ಗಾ ವಿಭಾಗದ ಪ್ರಾದೇಶಿಕ ಆಯುಕ್ತರು;

(ಜಿ) ಆ ಪ್ರದೇಶದಲ್ಲಿರುವ ಕಂದಾಯ ಜಿಲ್ಲೆಗಳ ಎಲ್ಲಾ ಜಿಲ್ಲಾಧಿಕಾರಿಗಳು;

(ಎಚ್) ಆ ಪ್ರದೇಶದಲ್ಲಿರುವ ನಗರಪಾಲಿಕೆ ಮೇಯರುಗಳು ಮತ್ತು ನಗರಸಭೆಗಳ ಅಧ್ಯಕ್ಷರು;

(ಐ) ಮಂಡಲಿ ಕಾರ್ಯದರ್ಶಿಯು ಸದಸ್ಯ ಕಾರ್ಯದರ್ಶಿಯಾಗಿರುವರು;

(ಜೆ) ಆ ಪ್ರದೇಶದಲ್ಲಿರುವ ಕಂದಾಯ ಜಿಲ್ಲೆಗಳ ಜಿಲ್ಲಾ ಪಂಚಾಯತಿಗಳ ಎಲ್ಲಾ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು.

(2) ಸಲಹಾ ಪರಿಷತ್ತು, ಮುಂಬರುವ ಹಣಕಾಸು ವರ್ಷಕ್ಕೆ ಸಂಬಂಧಿಸಿದಂತೆ ಪ್ರತಿಯೊಂದು ವರ್ಷದ ಸೆಪ್ಟೆಂಬರ್ ತಿಂಗಳಿಗೆ ಮೊದಲೇ ಮಂಡಲಿಗೆ ತನ್ನ ವಾರ್ಷಿಕ ಕರಡು ಅಭಿವೃದ್ಧಿ ಯೋಜನೆಯನ್ನು ಸಲ್ಲಿಸತಕ್ಕದ್ದು.

**5. ಸಲಹಾ ಪರಿಷತ್ತಿನ ಪ್ರಕಾರ್ಯಗಳು.– (1)**ಸಲಹಾ ಪರಿಷತ್ತು ಪ್ರದೇಶದ ವಾರ್ಷಿಕ ಅಭಿವೃದ್ಧಿ ಯೋಜನೆಯನ್ನು ಸಿದ್ಧಪಡಿಸತಕ್ಕದ್ದು. ಸಲಹಾ ಪರಿಷತ್ತು ಅಭಿವೃದ್ಧಿ ಯೋಜನೆಯ ಕರಡುನ್ನು ಸಿದ್ಧಪಡಿಸುವಾಗ,–

(ಎ) ಇವುಗಳನ್ನು ಗಮನದಲ್ಲಿಟ್ಟುಕೊಳ್ಳುವುದು,–

(i) ನೀರು ಮತ್ತು ಇತರ ಭೌತಿಕ ಹಾಗೂ ನೈಸರ್ಗಿಕ ಸಂಪನ್ಮೂಲಗಳನ್ನು ಹಂಚಿಕೊಳ್ಳುವುದು. ಮೂಲ ಸೌಲಭ್ಯ ಮತ್ತು ಪರಿಸರ ಸಂರಕ್ಷಣೆಯ ಸಮಗ್ರ ಅಭಿವೃದ್ಧಿಯನ್ನು ಒಳಗೊಂಡಂತೆ ಪಂಚಾಯತಿಗಳು ಮತ್ತು ಪುರಸಭೆಗಳ ನಡುವಿನ ಸಮಾನ ಹಿತಾಸಕ್ತಿಯ ವಿಷಯಗಳು;

(ii) ಭಾರತ ಸರ್ಕಾರ ಮತ್ತು ರಾಜ್ಯ ಸರ್ಕಾರವು ರೂಪಿಸಿದ ಸಮಗ್ರ ಧ್ಯೇಯೋದ್ದೇಶಗಳು ಮತ್ತು ಆದ್ಯತೆಗಳು;

(iii) ಭಾರತ ಸರ್ಕಾರ ಮತ್ತು ರಾಜ್ಯ ಸರ್ಕಾರದ ಏಜೆನ್ಸಿಗಳು ಆ ಪ್ರದೇಶದಲ್ಲಿ ಮಾಡಬಹುದಾದ ಬಂಡವಾಳದ ವ್ಯಾಪ್ತಿ ಮತ್ತು ಸ್ವರೂಪ ಮತ್ತು ಆರ್ಥಿಕವಾಗಿಯಾಗಲಿ ಅಥವಾ ಅನ್ಯಥಾ ಇತರ ಲಭ್ಯವಿರುವ ಸಂಪನ್ಮೂಲಗಳು;

(iv) ಶಿಕ್ಷಣ, ಹಣಕಾಸು, ಸಮಾಜದಲ್ಲಿ ಹಿಂದುಳಿದಿರುವಿಕೆ ಮತ್ತು ಆ ಪ್ರದೇಶದಲ್ಲಿ ಕೈಗೆತ್ತಿಕೊಳ್ಳಬೇಕಾದ ಆದ್ಯತೆಗಳು.

**6. ಪದಾವಧಿ ಮತ್ತು ಸೇವಾ ಷರತ್ತುಗಳು.–** (1) ರಾಜ್ಯ ಸರ್ಕಾರದ ಇಚ್ಛೆಗೊಳಪಟ್ಟು, ಅಧ್ಯಕ್ಷರು ಮತ್ತು ರಾಜ್ಯ ಸರ್ಕಾರವು 3ನೇ ಖಂಡದ (3)ನೇ ಉಪಖಂಡದ (ಇ) ಬಾಬಿನ ಅಡಿಯಲ್ಲಿ ನಾಮನಿರ್ದೇಶನ ಮಾಡಿದ ಇತರ ಅಧಿಕಾರೇತರ ಸದಸ್ಯರು, ಎರಡು ವರ್ಷಗಳ ಅವಧಿಗಾಗಿ ಪದವನ್ನು ಹೊಂದಿರತಕ್ಕದ್ದು.

(2) ಅಧ್ಯಕ್ಷ ಅಥವಾ ಪದನಿಮಿತ್ತ ಸದಸ್ಯರನ್ನು ಹೊರತುಪಡಿಸಿ, ಒಬ್ಬ ಸದಸ್ಯನು, ರಾಜ್ಯ ಸರ್ಕಾರಕ್ಕೆ ತನ್ನ ಕೈ ಬರಹದಲ್ಲಿ ರಾಜೀನಾಮೆಯನ್ನು ಸಲ್ಲಿಸಿ ಪದಮುಕ್ತನಾಗಬಹುದು ಆದರೆ ಆತನ ರಾಜೀನಾಮೆಯು ಅಂಗೀಕಾರವಾಗುವವರೆಗೂ ಆತನು ಪದದಲ್ಲಿ ಮುಂದುವರೆಯತಕ್ಕದ್ದು.

(3) ಅಧ್ಯಕ್ಷ ಮತ್ತು ಇತರ ಸದಸ್ಯರು ನಿಯಮಿಸಬಹುದಾದ ಅಂಥ ಭತ್ಯೆಗಳನ್ನು ಪಡೆಯತಕ್ಕದ್ದು.

(4) ಅಧ್ಯಕ್ಷ ಮತ್ತು ಇತರ ಸದಸ್ಯರಿಗೆ ಸಂದಾಯವಾಗಬೇಕಾದ ಭತ್ಯೆಗಳನ್ನು ಮಂಡಲಿಯ ನಿಧಿಯಿಂದ ಭರಿಸತಕ್ಕದ್ದು.

(5) ಯಾವುದೇ ಖಾಲಿ ಸ್ಥಾನದ ಅಸ್ತಿತ್ವ ಅಥವಾ ಮಂಡಲಿಯ ರಚನೆಯ ದೋಷ ಮಾತ್ರ ಕಾರಣದಿಂದಾಗಿಯೇ ಮಂಡಲಿಯ ಯಾವುದೇ ಆದೇಶ ಅಥವಾ ವ್ಯವಹರಣೆಯ ಅಸಿಂಧುವಾಗತಕ್ಕದ್ದಲ್ಲ.

7. **ಹುದ್ದೆಯ ಸದಸ್ಯತ್ವಕ್ಕೆ ಅನರ್ಹತೆ.–** (1) ಒಬ್ಬ ವ್ಯಕ್ತಿಯು, ಅವನು,–

(ಎ) ರಾಜ್ಯ ಸರ್ಕಾರದ ಅಭಿಪ್ರಾಯದಲ್ಲಿ ನೈತಿಕ ಅಧಃಪತನವನ್ನೊಳಗೊಳ್ಳುವ ಒಂದು ಅಪರಾಧಕ್ಕಾಗಿ ಅಪರಾಧ ನಿರ್ಣಿತನಾಗಿದ್ದು ಕಾರಾವಾಸದ ಶಿಕ್ಷೆಗೆ ಗುರಿಯಾಗಿದ್ದರೆ; ಅಥವಾ

(ಬಿ) ಅಸ್ವಸ್ಥಚಿತ್ತದವನಾಗಿದ್ದು, ಹಾಗೆಂದು ಒಂದು ಸಕ್ಷಮ ನ್ಯಾಯಾಲಯದಿಂದ ಘೋಷಿತನಾಗಿದ್ದರೆ; ಅಥವಾ

(ಸಿ) ಅವಿಮುಕ್ತ ದಿವಾಳಿಯಾಗಿದ್ದರೆ; ಅಥವಾ

(ಡಿ) ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಒಡೆತನ ಅಥವಾ ನಿಯಂತ್ರಣದಲ್ಲಿರುವ ಒಂದು ನಿಕಾಯ ಅಥವಾ ನಿಗಮದ ಸೇವೆಯಿಂದ ತೆಗೆದುಹಾಕಲಾದವನಾಗಿದ್ದರೆ ಅಥವಾ ವಜಾ ಆದವನಾಗಿದ್ದರೆ; ಅಥವಾ

(ಇ) ಮಂಡಲಿಯ ಆದೇಶದಿಂದ ಮಾಡಲಾದ ಯಾವುದೇ ಕಾರ್ಯದಲ್ಲಿ ಅಥವಾ ಮಂಡಲಿಯೊಡನೆ ಅಥವಾ ಅದರ ಅಡಿಯಲ್ಲಿ ಅಥವಾ ಅದರ ಮೂಲಕ ಅಥವಾ ಅದರ ಪರವಾಗಿ ಯಾವುದೇ ಕರಾರು ಅಥವಾ ನಿಯೋಜನೆಯಲ್ಲಿ ಸ್ವತಃ ಅವನು ಅಥವಾ ಅವನ ಪಾಲುದಾರನು ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಯಾವುದೇ ಷೇರನ್ನು ಅಥವಾ ಹಿತಾಸಕ್ತಿಯನ್ನು ಹೊಂದಿದ್ದರೆ;

(ಎಫ್) ಮಂಡಲಿಯ ಪರವಾಗಿ ವೇತನ ಪಡೆಯುವ ನ್ಯಾಯವಾದಿಯಾಗಿ ನಿಯೋಜಿತನಾದರೆ ಅಥವಾ ಮಂಡಲಿಯ ವಿರುದ್ಧವಾಗಿ ನ್ಯಾಯವಾದಿಯ ನಿಯೋಜನೆಯನ್ನು ಒಪ್ಪಿಕೊಂಡಿದ್ದರೆ,

– ಸದಸ್ಯನಾಗಿ ನೇಮಕ ಹೊಂದಲು ಮತ್ತು ಸದಸ್ಯನಾಗಲು ಅನರ್ಹನಾಗಿರತಕ್ಕದ್ದು.

(2) ಯಾವೊಬ್ಬ ವ್ಯಕ್ತಿಯನ್ನು, ಆತನು ಮಂಡಲಿಯ ವ್ಯವಹಾರಗಳಿಗೆ ಸಂಬಂಧಪಟ್ಟ ಯಾವುದೇ ಜಾಹೀರಾತನ್ನು ಪ್ರಕಟಿಸಲಾಗಿರುವ ಯಾವುದೇ ವೃತ್ತ ಪತ್ರಿಕೆಯಲ್ಲಿ ಷೇರು ಅಥವಾ ಹಿತಾಸಕ್ತಿಯನ್ನು ಹೊಂದಿದ್ದಾನೆ ಎಂಬ ಕಾರಣ ಮಾತ್ರದಿಂದಲೇ (1)ನೇ ಉಪಪ್ರಕರಣದ (ಇ) ಬಾಬಿನ ಅಡಿಯಲ್ಲಿ

ಅನರ್ಹಗೊಳಿಸತಕ್ಕದ್ದಲ್ಲ ಅಥವಾ ಸದರಿ ಖಂಡದ ಅರ್ಥವ್ಯಾಪ್ತಿಯಲ್ಲಿ ಯಾವುದೇ ಕರಾರು ಅಥವಾ ನಿಯೋಜನೆಯಲ್ಲಿ ಷೇರು ಅಥವಾ ಹಿತಾಸಕ್ತಿ ಹೊಂದಿರುವನೆಂದು ಭಾವಿಸತಕ್ಕದ್ದಲ್ಲ.

**8. ಸದಸ್ಯನನ್ನು ತೆಗೆದುಹಾಕುವುದು.–** ರಾಜ್ಯ ಸರ್ಕಾರವು, ಅಧ್ಯಕ್ಷನನ್ನು ಅಥವಾ ಇತರ ಸದಸ್ಯನನ್ನು, ಅವನು,–

(ಎ) 5ನೇ ಖಂಡದಲ್ಲಿ ಹೇಳಲಾದ ಯಾವುದೇ ಅನರ್ಹತೆಗಳಿಗೆ ಒಳಪಟ್ಟರೆ:

ಪರಂತು, ಅಧ್ಯಕ್ಷ ಅಥವಾ ಸದಸ್ಯನನ್ನು, ಪ್ರಸ್ತಾವದ ವಿರುದ್ಧ ತನ್ನ ಮನವಿಯನ್ನು ಸಲ್ಲಿಸಲು ಅವನಿಗೆ ಒಂದು ಅವಕಾಶವನ್ನು ಕೊಟ್ಟ ಹೊರತು, ಅವನು ಸದರಿ ಪ್ರಕರಣದ (1)ನೇ ಉಪಖಂಡದ (ಇ) ಬಾಬಿನಲ್ಲಿ ಹೇಳಲಾದ ಅನರ್ಹತೆಗೆ ಒಳಗಾಗಿದ್ದಾನೆಂಬ ಕಾರಣದ ಮೇಲೆ ತೆಗೆದುಹಾಕತಕ್ಕದ್ದಲ್ಲ ; ಅಥವಾ

(ಬಿ) ಅವನು ಕಾರ್ಯವನ್ನು ನಿರ್ವಹಿಸಲು ನಿರಾಕರಿಸಿದರೆ ಅಥವಾ ಕಾರ್ಯವನ್ನು ನಿರ್ವಹಿಸಲು ಅಸಮರ್ಥನಾದರೆ ; ಅಥವಾ

(ಸಿ) ಗೈರು ಹಾಜರಾಗಲು ಮಂಡಲಿಯಿಂದ ಅನುಮತಿ ಪಡೆಯದೆ ಮಂಡಲಿಯ ಮೂರು ನಿರಂತರ ಸಭೆಗಳಿಗೆ ಗೈರುಹಾಜರಾದರೆ; ಅಥವಾ

(ಡಿ) ರಾಜ್ಯ ಸರ್ಕಾರದ ಅಭಿಪ್ರಾಯದಲ್ಲಿ, ತನ್ನ ಸ್ಥಾನವನ್ನು ಅವನು ದುರುಪಯೋಗ ಪಡಿಸಿಕೊಂಡಿದ್ದು, ಅವನನ್ನು ಆ ಪದದಲ್ಲಿ ಮುಂದುವರಿಸಿದರೆ ಸಾರ್ವಜನಿಕ ಹಿತಾಸಕ್ತಿಗೆ ಬಾಧಕ ಉಂಟಾಗುವುದೆಂದು ಕಂಡುಬಂದರೆ,

– ಸದಸ್ಯತ್ವದಿಂದ ಆತನನ್ನು ತೆಗೆದು ಹಾಕತಕ್ಕದ್ದು:

ಪರಂತು ಯಾರೇ ಸದಸ್ಯನಿಗೆ ಅಂಥ ಪ್ರಸ್ತಾವದ ವಿರುದ್ಧ ತನ್ನ ಅಹ್ವಾಲು ಹೇಳಿಕೊಳ್ಳಲು ಒಂದು ಅವಕಾಶವನ್ನು ಕೊಟ್ಟ ಹೊರತು, ಈ ಖಂಡದ ಅಡಿಯಲ್ಲಿ ತೆಗೆದುಹಾಕತಕ್ಕದ್ದಲ್ಲ.

**9. ಕಾರ್ಯದರ್ಶಿ.–** (1) ಕಾರ್ಯದರ್ಶಿಯು, ರಾಜ್ಯ ಸರ್ಕಾರವು ಕಾಲಕಾಲಕ್ಕೆ ನಿರ್ಧರಿಸಬಹುದಾದಂತಹ ಸಂಬಳ ಮತ್ತು ಇತರ ಭತ್ಯೆಗಳನ್ನು ಪಡೆಯತಕ್ಕದ್ದು.

(2) ರಾಜ್ಯ ಸರ್ಕಾರವು, ಕಾಲಕಾಲಕ್ಕೆ ಕಾರ್ಯದರ್ಶಿಯವರಿಗೆ ರಜೆಗಳನ್ನು ಮಂಜೂರು ಮಾಡಬಹುದು.

(3) ಕಾರ್ಯದರ್ಶಿಯು ಮಂಡಲಿಯ ಮುಖ್ಯ ಕಾರ್ಯನಿರ್ವಾಹಕರಾಗಿರತಕ್ಕದ್ದು ಮತ್ತು,–

(ಎ) ಮಂಡಲಿಯು ಅನುಮೋದಿಸಿದ ಸ್ಕೀಮುಗಳನ್ನು ಕಾರ್ಯಗತಗೊಳಿಸಲು ಜವಾಬ್ದಾರನಾಗಿರತಕ್ಕದ್ದು;

(ಬಿ) ಮಂಡಲಿಯ ನಿಧಿಯನ್ನು ನಿರ್ವಹಿಸತಕ್ಕದ್ದು;

(ಸಿ) ಮಂಡಲಿಯ ಲೆಕ್ಕಪತ್ರಗಳನ್ನು ಇಟ್ಟುಕೊಂಡು ಬರುವಂತೆ ಮಾಡತಕ್ಕದ್ದು ; ಮತ್ತು

(ಡಿ) ಈ ಆದೇಶದ ಅಥವಾ ತತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನ ಮೂಲಕ ಅಥವಾ ಅದರ ಅಡಿಯಲ್ಲಿ ಆತನಿಗೆ ಪ್ರದತ್ತವಾದ ಅಂಥ ಇತರ ಪ್ರಕಾರ್ಯಗಳನ್ನು ನೆರವೇರಿಸತಕ್ಕದ್ದು.

**10. ಮಂಡಲಿಯ ಸಭೆಗಳು.–** (1) ಮಂಡಲಿಯ ಸಭೆಗಳನ್ನು ಅಧ್ಯಕ್ಷರು ಅಥವಾ ಅಧ್ಯಕ್ಷರ ಪೂರ್ವಾನುಮತಿ ಪಡೆದು ಕಾರ್ಯದರ್ಶಿಯು ಕರೆಯತಕ್ಕದ್ದು ಮತ್ತು ಮಂಡಲಿಯ ಅಧಿಕಾರ ವ್ಯಾಪ್ತಿಯೊಳಗೆ ಬರುವ ಯಾವುದೇ ಸ್ಥಳದಲ್ಲಿ ಅಥವಾ ರಾಜ್ಯದ ಕೇಂದ್ರ ಸ್ಥಾನದಲ್ಲಿ ನಡೆಸತಕ್ಕದ್ದು.

(2) ಮಂಡಲಿಯು ಕಡೇ ಪಕ್ಷ ಪ್ರತಿ ಮೂರು ತಿಂಗಳಿಗೊಮ್ಮೆಯಾದರೂ ಸಭೆ ಸೇರತಕ್ಕದ್ದು. ಮಂಡಲಿಯು ತನ್ನ ವಾರ್ಷಿಕ ಸಭೆಗಳ ದಿನಸೂಚಿಯನ್ನು ಮುಂಚಿತವಾಗಿ ಅಧಿಸೂಚಿಸತಕ್ಕದ್ದು.

(3) ಅಧ್ಯಕ್ಷರು ವಿಶೇಷ ಸಭೆಯನ್ನು ಕರೆಯುವುದು ಅವಶ್ಯವೆಂದು ಭಾವಿಸಿದರೆ ಅಧ್ಯಕ್ಷರು ಅಥವಾ ಅಧ್ಯಕ್ಷರ ಪೂರ್ವಾನುಮತಿ ಪಡೆದು ಕಾರ್ಯದರ್ಶಿಯು ಅಂಥ ಸಭೆಯನ್ನು ಕರೆಯಬಹುದು. ಸಭೆಯನ್ನು ಮಂಡಲಿಯ ಅಧಿಕಾರ ವ್ಯಾಪ್ತಿಯೊಳಗೆ ಬರುವ ಯಾವುದೇ ಸ್ಥಳದಲ್ಲಿ ಅಥವಾ ರಾಜ್ಯ ಕೇಂದ್ರ ಸ್ಥಾನದಲ್ಲಿ ನಡೆಸತಕ್ಕದ್ದು.

(4) ಮಂಡಲಿಯು ತನ್ನ ಸಭೆಗಳಲ್ಲಿಯ ವ್ಯವಹಾರ ನಿರ್ವಹಣೆಯ ಸಂಬಂಧದಲ್ಲಿ ವಿನಿಯಮಗಳ ಮೂಲಕ ಉಪಬಂಧ ಕಲ್ಪಿಸಬಹುದಾದಂಥ ಕಾರ್ಯವಿಧಾನವನ್ನು ಅನುಸರಿಸತಕ್ಕದ್ದು.

(5) ಅಧ್ಯಕ್ಷರು ಪ್ರತಿಯೊಂದು ಸಭೆಯ ಅಧ್ಯಕ್ಷತೆಯನ್ನು ವಹಿಸತಕ್ಕದ್ದು ಮತ್ತು ಯಾವುದೇ ಕಾರಣದಿಂದ ಅಧ್ಯಕ್ಷರಿಗೆ ಯಾವುದೇ ಸಭೆಯಲ್ಲಿ ಭಾಗವಹಿಸಲು ಸಾಧ್ಯವಾಗದಿದ್ದರೆ, ಸಭೆಯಲ್ಲಿ ಹಾಜರಿದ್ದ ಸದಸ್ಯರ ಪೈಕಿ ಆಯ್ಕೆ ಮಾಡುವ ಯಾವೊಬ್ಬ ಇತರ ಸದಸ್ಯನು ಸಭೆಯ ಅಧ್ಯಕ್ಷತೆಯನ್ನು ವಹಿಸತಕ್ಕದ್ದು.

(6) ಕೋರಂಗೆ ಮೂರನೇ ಒಂದು ಭಾಗದ ಸದಸ್ಯರು ಇರತಕ್ಕದ್ದು.

**11. ವ್ಯವಹರಣೆಗಳು ಸರಿಯಾಗಿವೆ ಮತ್ತು ಸಿಂಧುವಾಗಿವೆ ಎಂಬ ಪೂರ್ವಭಾವನೆ.–** ಮಂಡಲಿಯ ಯಾವುದೇ ಕ್ರಮ ಅಥವಾ ವ್ಯವಹರಣೆಯು ಅನ್ಯಥಾ ಈ ಆದೇಶದ ಉಪಬಂಧಗಳಿಗೆ ಅನುಸಾರವಾಗಿ ಇರುವಾಗ, ಅಂಥ ಕ್ರಮ ಅಥವಾ ವ್ಯವಹರಣೆಯು ಅಧ್ಯಕ್ಷನಾಗಿ ಅಥವಾ ಸದಸ್ಯನಾಗಿ ಕೆಲಸ ಮಾಡುತ್ತಿರುವ ಯಾವೊಬ್ಬ ವ್ಯಕ್ತಿಯ ಅನರ್ಹತೆಯ ಕಾರಣದಿಂದ ಅಥವಾ ನೇಮಕಾತಿಯಲ್ಲಿನ ದೋಷದ ಕಾರಣದಿಂದ ದೋಷಪೂರಿತವಾಗುತ್ತದೆ ಎಂದು ಭಾವಿಸತಕ್ಕದ್ದಲ್ಲ.

**ಅಧ್ಯಾಯ – III**

**12. ಮಂಡಲಿಯ ಪ್ರಕಾರ್ಯಗಳು.–** ಮಂಡಲಿಯು, ಕಾಲಕಾಲಕ್ಕೆ,–

(ಎ) ವಾರ್ಷಿಕ ಕರಡು ಅಭಿವೃದ್ಧಿ ಯೋಜನೆಯಲ್ಲಿ ಸಲಹಾ ಪರಿಷತ್ತು ಮಾಡಿದ ಶಿಫಾರಸ್ಸುಗಳನ್ನು ಪರಿಗಣಿಸತಕ್ಕದ್ದು.

(ಬಿ) ಸಮಗ್ರ ರಾಜ್ಯದಲ್ಲಿನ ಅಭಿವೃದ್ಧಿ ಹಂತಗಳಿಗೆ ಸಂಬಂಧಿಸಿದಂತೆ, ಯುಕ್ತ ಸೂಚಕಗಳ ಆಧಾರದ ಮೇಲೆ, ತನ್ನ ಪ್ರದೇಶದ ಸಂಬಂಧದಲ್ಲಿ, ವಿವಿಧ ವಲಯಗಳ ಅಭಿವೃದ್ಧಿಯ ಸಂಬಂಧಿತ ಹಂತಗಳನ್ನು ನಿಶ್ಚಿತಪಡಿಸಿಕೊಳ್ಳತಕ್ಕದ್ದು;

(ಸಿ) ಬ್ಯಾಕ್‌ಲಾಗ್ ಅನ್ನು ತೆಗೆದುಹಾಕುವಲ್ಲಿ ಮತ್ತು ತನ್ನ ಪ್ರದೇಶದೊಳಗೆ ಸಮಗ್ರ ಅಭಿವೃದ್ಧಿಯನ್ನು ಪೂರ್ಣಗೊಳಿಸುವಲ್ಲಿನ ವಿವಿಧ ಅಭಿವೃದ್ಧಿ ಪ್ರಯತ್ನಗಳ ಪ್ರಭಾವವನ್ನು ಮೌಲ್ಯಮಾಪನ ಮಾಡತಕ್ಕದ್ದು;

(ಡಿ) ವಾರ್ಷಿಕ ಯೋಜನೆಯನ್ನು ಒಳಗೊಂಡಂತೆ ಯೋಜನಾ ಅವಧಿಯಲ್ಲಿ ಅಭಿವೃದ್ಧಿ ಮಂಡಲಿಯ ಆ ಪ್ರದೇಶದ ಮೇಲೆ ಅಭಿವೃದ್ಧಿ ವೆಚ್ಚದ ಹಂತಗಳನ್ನು ಸಲಹೆ ಮಾಡತಕ್ಕದ್ದು; ಮತ್ತು

(ಇ) ಆ ಪ್ರದೇಶದಲ್ಲಿ ಹೂಡಿಕೆ ಮಾಡಿರುವ ಕೈಗಾರಿಕೆಗಳು ಖಾಸಗಿ ಶಿಕ್ಷಣ ಸಂಸ್ಥೆಗಳಿಗೆ ನೀಡುವ ತೆರಿಗೆ ರಜೆ (ಟ್ಯಾಕ್ಸ್ ಹಾಲಿಡೇ) ಇತ್ಯಾದಿಗಳಂಥ ಪ್ರೋತ್ಸಾಹಕಗಳಂಥ ಆರ್ಥಿಕ ಪರಿಣಾಮಗಳನ್ನು ಹೊಂದಬಹುದಾದ ಆ ಪ್ರದೇಶಕ್ಕಾಗಿ ಮತ್ತು ಆ ಪ್ರದೇಶಕ್ಕೆ ಸೇರಿರುವ ವ್ಯಕ್ತಿಗಳಿಗೆ ಅವರ ಆರ್ಥಿಕ ಮಿತಿಗಳೊಳಗೆ ಶೈಕ್ಷಣಿಕ ಸಂಸ್ಥೆಗಳಿಗೆ ಉದ್ಯೋಗದಲ್ಲಿ ಮತ್ತು ಪ್ರವೇಶಾತಿಯಲ್ಲಿ ಮೀಸಲಾತಿಯನ್ನು ಕಲ್ಪಿಸುವವರಿಗೂ ಸಹ "ಕಾರ್ಯನೀತಿಗಳನ್ನು" ರಾಜ್ಯಪಾಲರಿಗೆ ಸಲಹೆ ನೀಡತಕ್ಕದ್ದು;

(ಎಫ್) ತನ್ನ ಕಾಮಗಾರಿಯ ಮೇಲೆ ವಾರ್ಷಿಕ ವರದಿಯನ್ನು ತಯಾರಿಸಿ, ಕಾರ್ಯ ಸಾಧ್ಯವಾದಷ್ಟು, ಪ್ರತಿಯೊಂದು ಹಣಕಾಸು ವರ್ಷದ ಮುಕ್ತಾಯದ ತರುವಾಯ ಮೂರು ತಿಂಗಳುಗಳೊಳಗೆ, ಕರ್ನಾಟಕ ರಾಜ್ಯ ವಿಧಾನಮಂಡಲದ ಮುಂದೆ ಮಂಡಿಸಲು ರಾಜ್ಯಪಾಲರಿಗೆ ಕಳುಹಿಸತಕ್ಕದ್ದು.

(ಜಿ) ಮಂಡಲಿಗೆ ವರ್ಷಕ್ಕೆ ನೀಡಲಾಗುವ ಆರ್ಥಿಕ ರಕ್ಷಣೆಗಳೊಳಗೆ ಹೊಸ ಸಾರ್ವಜನಿಕ ಆರೋಗ್ಯ ಕೇಂದ್ರ, ಪಶು ಔಷಧಾಲಯ, ಪ್ರಾಥಮಿಕ ಮತ್ತು ಮಾಧ್ಯಮಿಕ ಶಾಲೆಗಳು ಮುಂತಾದವುಗಳಂಥ ಸಂಸ್ಥೆಗಳಲ್ಲಿ ಹುದ್ದೆಗಳನ್ನು ಸೃಜಿಸುವ ಮತ್ತು ಸಂಸ್ಥೆಗಳನ್ನು ಮಂಜೂರು ಮಾಡುವ ಬಗ್ಗೆ ಸಲಹೆಯನ್ನು ನೀಡತಕ್ಕದ್ದು.

**13. ಯೋಜನೆಯನ್ನು ಸಿದ್ಧಪಡಿಸುವುದು ಮತ್ತು ಸ್ಕೀಮ್‌ನ ಅನುಮೋದನೆ.–** (1) ಮಂಡಲಿಯು, ಸಲಹಾ ಪರಿಷತ್ತು ಸಿದ್ಧಪಡಿಸಿದ ಕರಡು ಅಭಿವೃದ್ಧಿ ಯೋಜನೆಯ ಪರಿಗಣನೆಗೆ ತೆಗೆದುಕೊಂಡ ತರುವಾಯ, ಪ್ರತಿವರ್ಷವು, ಹೈದ್ರಾಬಾದ್–ಕರ್ನಾಟಕ ಪ್ರದೇಶದ ಅಭಿವೃದ್ಧಿಗಾಗಿ ಒಂದು ವಾರ್ಷಿಕ ಯೋಜನೆಯನ್ನು ಸಿದ್ಧಪಡಿಸತಕ್ಕದ್ದು ಮತ್ತು ಅದರ ಅನುಮೋದನೆಗಾಗಿ ಅದನ್ನು ರಾಜ್ಯಪಾಲರಿಗೆ ಕಳುಹಿಸತಕ್ಕದ್ದು. ರಾಜ್ಯಪಾಲರು ಯೋಜನೆಯನ್ನು ಯಾವುದೇ ಮಾರ್ಪಾಡಿನೊಂದಿಗೆ ಅಥವಾ ಮಾರ್ಪಾಟಿಲ್ಲದೆ ಅನುಮೋದಿಸಬಹುದು.

(2) ಈ ಆದೇಶದ ಉಪಬಂಧಗಳಿಗೆ ಮತ್ತು ರಾಜ್ಯಸರ್ಕಾರದ ಯೋಜನೆಗಳ ನಿಯಂತ್ರಣಕ್ಕೆ ಒಳಪಟ್ಟು, ಹೈದ್ರಾಬಾದ್–ಕರ್ನಾಟಕ ಪ್ರದೇಶದಲ್ಲಿ ಕಾರ್ಯನಿರ್ವಹಿಸುತ್ತಿರುವ ಅಭಿವೃದ್ಧಿ ಇಲಾಖೆಗಳು, ಜಿಲ್ಲಾ ಪಂಚಾಯತ್ ಮತ್ತು ಮಂಡಲಿಯು ಮಾನ್ಯತೆ ನೀಡಿದ ಸರ್ಕಾರೇತರ ಸಂಘವು ಯೋಜನೆಗಳಿಗನುಸಾರವಾಗಿ ರೂಪಿಸಿದ ಸ್ಕೀಮುಗಳನ್ನು ಮಂಡಲಿಯು ಅನುಮೋದಿಸತಕ್ಕದ್ದು.

**14. ಮೇಲ್ವಿಚಾರಣೆ.–** ಮಂಡಲಿಯು, ಯೋಜನೆಯ ಅಡಿಯಲ್ಲಿ ಆದ ವೆಚ್ಚದ ಮತ್ತು ಯೋಜನೆಗೆ ಅನುಸಾರವಾಗಿ ಹೈದ್ರಾಬಾದ್–ಕರ್ನಾಟಕದಲ್ಲಿ ಕಾರ್ಯ ನಿರ್ವಹಿಸುತ್ತಿರುವ ವಿವಿಧ ಅಭಿವೃದ್ಧಿ ಇಲಾಖೆಗಳ, ಜಿಲ್ಲಾ ಪಂಚಾಯತ್ ಮತ್ತು ಮಂಡಳಿಯು ಮಾನ್ಯತೆ ನೀಡಿದ ಸರ್ಕಾರೇತರ ಸಂಘಗಳ ಕಾರ್ಯನಿರ್ವಹಣೆಯನ್ನು ಮೇಲ್ವಿಚಾರಣೆ ಮಾಡಲು ಮತ್ತು ಪುನರೀಕ್ಷಣೆ ಮಾಡಲು ಅಧಿಕಾರವನ್ನು ಹೊಂದಿರತಕ್ಕದ್ದು.

**15. ಸಮನ್ವಯ.–** ಮಂಡಲಿಯು, ತನ್ನ ಯೋಜನೆಯಲ್ಲಿ ಒಳಗೊಂಡಿರುವ ಹೈದ್ರಾಬಾದ್–ಕರ್ನಾಟಕ ಪ್ರದೇಶ ಅಭಿವೃದ್ಧಿಯ ಸ್ಕೀಮುಗಳಲ್ಲಿ ಅನುಷ್ಠಾನಗೊಳ್ಳುವ ಎಲ್ಲಾ ಅಭಿವೃದ್ಧಿ ಇಲಾಖೆಗಳು, ಜಿಲ್ಲಾ ಪಂಚಾಯತ್‌ಗಳು ಮತ್ತು ಮಂಡಲಿಯು ಮಾನ್ಯತೆ ನೀಡಿದ ಸರ್ಕಾರೇತರ ಸಂಘಗಳ ಪ್ರಕಾರ್ಯಗಳನ್ನು ಸಮನ್ವಯಗೊಳಿಸತಕ್ಕದ್ದು ಮತ್ತು ಅಂಥ ಅಭಿವೃದ್ಧಿ ಇಲಾಖೆಗಳು, ಜಿಲ್ಲಾ ಪಂಚಾಯತ್ ಮತ್ತು ಮಂಡಲಿಯು ಮಾನ್ಯತೆ ನೀಡಿದ ಸರ್ಕಾರೇತರ ಸಂಘಗಳ ವೈಯಕ್ತಿಕ ಸ್ಥಿತಿಯನ್ನು ಕೂಡಾ ಪುನರೀಕ್ಷಿಸತಕ್ಕದ್ದು ಮತ್ತು ರಾಜ್ಯ ಸರ್ಕಾರಕ್ಕೆ ಈ ಬಗ್ಗೆ ಸಲಹೆಗಳನ್ನು ನೀಡಬಹುದು.

**16. ಸ್ಕೀಮುಗಳ ಅನುಷ್ಠಾನ.–** (ಎ) ಮಂಡಲಿಯು, ಹೈದ್ರಾಬಾದ್–ಕರ್ನಾಟಕ ಪ್ರದೇಶದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅಭಿವೃದ್ಧಿ ಇಲಾಖೆಗಳು, ಜಿಲ್ಲಾ ಪಂಚಾಯತ್, ನಗರ ಸ್ಥಳೀಯ ಸಂಸ್ಥೆಗಳು ಮತ್ತು ಮಂಡಳಿಯು ಮಾನ್ಯತೆ ನೀಡಿದ ಸರ್ಕಾರೇತರ ಸಂಘಟನೆಗಳ ಮೂಲಕ ತನ್ನ ಯೋಜನೆಯಲ್ಲಿ ಒಳಗೊಂಡ ಸ್ಕೀಮುಗಳ ಅನುಷ್ಠಾನಕ್ಕೆ ಹೊಣೆಗಾರನಾಗಿರತಕ್ಕದ್ದು. ಮಂಡಲಿಯು, ನಿಯಮಿಸಬಹುದಾದ ಅಂಥ ನಿಯಮಗಳಿಗೆ ಒಳಪಟ್ಟು, ಯಾವುದೇ ಕಾರಣಕ್ಕಾಗಿ ಒಂದು ಅಭಿವೃದ್ಧಿ ಇಲಾಖೆಗೆ ಯೋಜನೆಯಡಿಯಲ್ಲಿ ತನಗೆ ಹಂಚಿಕೆಯಾದ ಮೊತ್ತದಿಂದ ಪೂರ್ಣ ವೆಚ್ಚವನ್ನು ಬಳಸಿಕೊಳ್ಳಲಾಗದಿದ್ದಲ್ಲಿ, ಒಂದು ಇಲಾಖೆಯಿಂದ, ಮತ್ತೊಂದಕ್ಕೆ ನಿಧಿಯನ್ನು ಪುನರ್ ವಿನಿಯೋಗ ಮಾಡಬಹುದು.

(ಬಿ) ಎಲ್ಲಾ ಕಾರ್ಯಗಳು ಮತ್ತು ಪ್ರಕಾರ್ಯಗಳನ್ನು ಅನುಷ್ಠಾನಗೊಳಿಸಲು ಮಂಡಲಿ ಅಥವಾ ಅದರ ನಿಯೋಗಿಗಳು ಸಂಪೂರ್ಣ ಆಡಳಿತಾತ್ಮಕ, ಆರ್ಥಿಕ ಮತ್ತು ತಾಂತ್ರಿಕ ಅಧಿಕಾರಗಳನ್ನು ಹೊಂದಿರುವರು.

(ಸಿ) ಹಣಕಾಸು ವರ್ಷದಲ್ಲಿ ವಿನಿಯೋಗಿಸದೆ ಉಳಿದಿರುವ ನಿಧಿಯನ್ನು ರದ್ದುಗೊಳಿಸತಕ್ಕದ್ದಲ್ಲ ಮತ್ತು ಅಂಥ ಬಾಕಿ ಮೊತ್ತವನ್ನು ಮುಂದಿನ ಹಣಕಾಸು ವರ್ಷಕ್ಕೆ ಮುಂದುವರಿಸತಕ್ಕದ್ದು. ಒಂದು ವರ್ಷದಿಂದ ಮತ್ತೊಂದು ವರ್ಷಕ್ಕೆ ಮುಂದಕ್ಕೊಯ್ಯಲಾದ ನಿಧಿಗಳು ಅಂಥ ಹಣಕಾಸು ವರ್ಷದಲ್ಲಿ ನಿಗದಿಗೊಳಿಸಲಾದ ನಿಧಿಗಳ ಶೇಕಡಾ 20ಕ್ಕಿಂತ ಹೆಚ್ಚಾಗಿರತಕ್ಕದ್ದಲ್ಲ.

**17. ಅನುಷ್ಠಾನ ಸಮಿತಿ.–** (1) ಅನುಷ್ಠಾನ ಸಮಿತಿಯು ಈ ಮುಂದಿನ ಸದಸ್ಯರನ್ನು ಒಳಗೊಂಡಿರತಕ್ಕದ್ದು, ಎಂದರೆ:–

(ಎ) ಮಂಡಲಿಯ ಕಾರ್ಯದರ್ಶಿಯು ಅಧ್ಯಕ್ಷರಾಗಿರತಕ್ಕದ್ದು;

(ಬಿ) ಬಳ್ಳಾರಿ, ಬೀದರ್, ಗುಲ್ಬರ್ಗಾ, ಯಾದಗಿರಿ, ಕೊಪ್ಪಳ ಮತ್ತು ರಾಯಚೂರು ಜಿಲ್ಲೆಗಳ ಜಿಲ್ಲಾ ಪಂಚಾಯತಿಗಳ ಮುಖ್ಯ ಕಾರ್ಯನಿರ್ವಹಣಾ ಅಧಿಕಾರಿ ಅಥವಾ ಹಿರಿಯ ಸಮೂಹ "ಎ" ಅಧಿಕಾರಿಯ ದರ್ಜೆಗೆ ಕಡಿಮೆಯಲ್ಲದ ದರ್ಜೆಯ ಆತನ ನಾಮನಿರ್ದೇಶಿತ;

(ಸಿ) ಹೈದ್ರಾಬಾದ್-ಕರ್ನಾಟಕ ಪ್ರದೇಶದ ಪ್ರತಿಯೊಂದು ಜಿಲ್ಲೆಯ ಜಿಲ್ಲಾಧಿಕಾರಿ;

(ಡಿ) ಕುಲಪತಿ, ಗುಲ್ಬರ್ಗಾ ವಿಶ್ವವಿದ್ಯಾಲಯ;

(ಇ) ರಾಜ್ಯ ಸರ್ಕಾರವು ನೇಮಕ ಮಾಡಬಹುದಾದ ಅಂಥ ಇತರ ಅಧಿಕಾರಿಗಳು.

(2) ರಾಜ್ಯ ಸರ್ಕಾರವು, ಅಧಿಸೂಚನೆಯ ಮೂಲಕ ಜಿಲ್ಲಾ, ತಾಲ್ಲೂಕು ಮತ್ತು ಗ್ರಾಮ ಪಂಚಾಯತಿ ಮಟ್ಟದಲ್ಲಿ ಅನುಷ್ಠಾನ ಸಮಿತಿಗಳನ್ನು ಸಹ ರಚಿಸಬಹುದು.

**18. ಅನುಷ್ಠಾನ ಸಮಿತಿಯ ಅಧಿಕಾರಗಳು.**– (1) ಅನುಷ್ಠಾನ ಸಮಿತಿಯು, ಮಂಡಲಿಯು ತನಗೆ ಪ್ರತ್ಯಾಯೋಜಿಸುವ ಮಂಡಲಿಯ ಅಂಥ ಅಧಿಕಾರಗಳನ್ನು ಚಲಾಯಿಸತಕ್ಕದ್ದು.

(2) ಅನುಷ್ಠಾನ ಸಮಿತಿಯು ಕನಿಷ್ಠ ತಿಂಗಳಿಗೊಮ್ಮೆಯಾದರೂ ಸಭೆ ಸೇರತಕ್ಕದ್ದು.

(3) ಅನುಷ್ಠಾನ ಸಮಿತಿಯು, ವಿನಿಯಮಗಳ ಮೂಲಕ ಉಪಬಂಧ ಕಲ್ಪಿಸಬಹುದಾದಂತೆ, ತನ್ನ ಸಭೆಯಲ್ಲಿನ ವ್ಯವಹಾರ ನಿರ್ವಹಣೆಯ ಸಂಬಂಧದ ಅಂಥ ಕಾರ್ಯವಿಧಾನ ನಿಯಮಗಳನ್ನು ಪಾಲಿಸತಕ್ಕದ್ದು.

**19. ಮಾಹಿತಿಯನ್ನು ಪಡೆಯುವುದು.**– ಮಂಡಲಿಯು, ಈ ಆದೇಶದ ಉದ್ದೇಶಗಳಿಗಾಗಿ, ಹೈದ್ರಾಬಾದ್-ಕರ್ನಾಟಕ ಪ್ರದೇಶದ ಯಾವುದೇ ಜಿಲ್ಲಾ ಪಂಚಾಯತಿಯಿಂದ ಅಥವಾ ಹೈದ್ರಾಬಾದ್-ಕರ್ನಾಟಕದಲ್ಲಿನ ಯಾವುದೇ ಪ್ರದೇಶದ ಮೇಲೆ ಅಧಿಕಾರ ವ್ಯಾಪ್ತಿಯನ್ನು ಹೊಂದಿರುವ ರಾಜ್ಯ ಸರ್ಕಾರದ ಯಾವೊಬ್ಬ ಅಧಿಕಾರಿಯಿಂದ ಮಾಹಿತಿಯನ್ನು ಕೋರಬಹುದು ಮತ್ತು ಪಡೆಯಬಹುದು ಹಾಗೂ ಅಂಥ ಜಿಲ್ಲಾ ಪಂಚಾಯತಿ ಅಥವಾ ಅಧಿಕಾರಿಯು, ಮಂಡಲಿಯು ಕೋರಿರುವ ಮಾಹಿತಿಯನ್ನು ಒದಗಿಸಲು ಬದ್ಧನಾಗಿರತಕ್ಕದ್ದು.

**20. ಅಧಿಕಾರಗಳ ಪ್ರತ್ಯಾಯೋಜನೆ.**– ಮಂಡಲಿಯು, ಅಧಿಸೂಚನೆಯ ಮೂಲಕ, ಅನುಷ್ಠಾನ ಸಮಿತಿಗೆ ಅಥವಾ ಮಂಡಲಿಯ ಕಾರ್ಯದರ್ಶಿಗೆ, ಈ ಆದೇಶದ ಮೂಲಕ ಅಥವಾ ಅದರ ಅಡಿಯಲ್ಲಿ ತನಗೆ ಪ್ರದತ್ತವಾದ ಅಧಿಕಾರಗಳನ್ನು ಪ್ರತ್ಯಾಯೋಜಿಸಬಹುದು.

**ಅಧ್ಯಾಯ – IV**

**21. ಮಂಡಲಿಯ ನಿಧಿ.**– (1) ಮಂಡಲಿಯ ನಿಧಿ ಎಂದು ಕರೆಯಲಾಗುವ ಒಂದು ನಿಧಿಯು ಇರತಕ್ಕದ್ದು.

(2) ಈ ಮುಂದಿನವುಗಳು, ಎಂದರೆ:–

(i) ಕೇಂದ್ರ ಸರ್ಕಾರ, ರಾಜ್ಯ ಸರ್ಕಾರ, ಯಾವುದೇ ಸ್ಥಳೀಯ ಪ್ರಾಧಿಕಾರ, ನಿಗಮಿತವಾದ ಅಥವಾ ನಿಗಮಿತವಲ್ಲದ ಯಾವುದೇ ಸಂಸ್ಥೆ ಅಥವಾ ಯಾವೊಬ್ಬ ವ್ಯಕ್ತಿಯು ನೀಡಿದ ಎಲ್ಲಾ ಅನುದಾನಗಳು, ಧನಸಹಾಯ, ದೇಣಿಗೆಗಳು ಮತ್ತು ಉಡುಗೊರೆಗಳು;

(ii) ಮಂಡಲಿಯಿಂದ ಸಾಲಪಡೆದ ಮೊತ್ತ; ಮತ್ತು

(iii) ಯಾವುದೇ ಮೂಲದಿಂದಾಗಿರಲಿ, ಅದರಿಂದ, ಮಂಡಲಿಯ ಮೂಲಕ ಅಥವಾ ಅದರ ಪರವಾಗಿ ಸ್ವೀಕರಿಸಲಾದ ಎಲ್ಲಾ ಇತರ ಮೊಬಲಗುಗಳು,

– ಮಂಡಲಿ ನಿಧಿಯ ಭಾಗವಾಗಿರತಕ್ಕದ್ದು ಅಥವಾ ಅದರೊಳಗೆ ಸಂದಾಯ ಮಾಡುವುದಾಗಿರತಕ್ಕದ್ದು.

(3) ರಾಜ್ಯ ಸರ್ಕಾರದಿಂದ ಅನ್ಯಥಾ ನಿರ್ದೇಶಿಸಲ್ಪಟ್ಟ ಹೊರತು, ನಿಧಿಗೆ ಜಮೆಯಾದ ಎಲ್ಲಾ ಹಣವನ್ನು ಯಾವುದೇ ರಾಷ್ಟ್ರೀಯ ಅಥವಾ ಅನುಸೂಚಿತ ಬ್ಯಾಂಕಿನಲ್ಲಿ ಹೂಡಿಕೆ ಮಾಡತಕ್ಕದ್ದು.

**22. ಅಭಿವೃದ್ಧಿ ವೆಚ್ಚಕ್ಕಾಗಿ ನಿಧಿಯ ಹಂಚಿಕೆ.**– (1) ಕರ್ನಾಟಕ ರಾಜ್ಯಪಾಲರು, ಸಮಗ್ರ ರಾಜ್ಯದ ಅಗತ್ಯತೆಗೊಳಪಟ್ಟು, ಮಂಡಲಿಯ ಪ್ರದೇಶಗಳ ಮೇಲೆ ಅಭಿವೃದ್ಧಿ ವೆಚ್ಚಕ್ಕಾಗಿ ನಿಧಿಯ ನ್ಯಾಯಸಮ್ಮತ ಹಂಚಿಕೆಯನ್ನು ಖಚಿತಪಡಿಸಿಕೊಳ್ಳತಕ್ಕದ್ದು.

(2) ನಿಧಿಯ ನ್ಯಾಯಸಮ್ಮತ ಹಂಚಿಕೆಯನ್ನು ಖಚಿತಪಡಿಸಿಕೊಳ್ಳುವಲ್ಲಿ, ರಾಜ್ಯಪಾಲರು,–

(ಎ) ಮಂಡಳಿಯು ಮಾಡಿದ ಶಿಫಾರಸುಗಳು, ಯಾವುದಾದರೂ ಇದ್ದಲ್ಲಿ, ಅದನ್ನು ಪರಿಗಣನೆಗೆ ತೆಗೆದುಕೊಳ್ಳಬಹುದು; ಮತ್ತು

(ಬಿ) ತಾನು ಅವಶ್ಯ ಮತ್ತು ಯುಕ್ತವೆಂದು ಪರಿಗಣಿಸಿದಲ್ಲಿ, ನಿಧಿಯ ಹಂಚಿಕೆಯ ವಿಷಯದಲ್ಲಿ ಯಾವೊಬ್ಬ ವ್ಯಕ್ತಿ ಅಥವಾ ವ್ಯಕ್ತಿಗಳ ಸಂಸ್ಥೆಯಿಂದ ಸಲಹೆಯನ್ನು ಕೋರಬಹುದು.

(ಸಿ) ಪ್ರಾದೇಶಿಕ ಅಸಮತೋಲನವನ್ನು ಅಧ್ಯಯನ ಮಾಡಲು ಮತ್ತು ಬ್ಯಾಕ್‌ಲಾಗ್ ಗಳನ್ನು ಮತ್ತು ಸರಿಯಾದ ಬ್ಯಾಕ್‌ಲಾಗ್‌ಗೆ ಅಗತ್ಯಪಡಿಸಲಾದ ಸಂಪನ್ಮೂಲಗಳನ್ನು ಪರಿಮಾಣಿಸಲು ಸ್ಥಾಯಿ ಅಥವಾ ತತ್ಪೂರ್ತ ತಜ್ಞ ಸಮಿತಿ (ಗಳು) ಅನ್ನು ರಚಿಸತಕ್ಕದ್ದು ಮತ್ತು ರಾಜ್ಯದ ಮುಖ್ಯಮಂತ್ರಿಗಳೊಂದಿಗೆ ಸಮಾಲೋಚಿಸಿ ಆ ಪ್ರದೇಶಕ್ಕಾಗಿ ರಾಜ್ಯ ಯೋಜನೆ ಅಥವಾ ಯೋಜನೇತರ ಅಥವಾ ಅವೆರಡರಿಂದ ನಿಧಿಗಳನ್ನು ಹಂಚಿಕೆ ಮಾಡುವ ಬಗ್ಗೆ ಸಲಹೆ ನೀಡುವುದು.

(ಡಿ) ಅಂಥ ಸಲಹೆಯನ್ನು ಸ್ವೀಕರಿಸಿದ ತರುವಾಯ ಸರ್ಕಾರವು ಇಡಿಯಾಗಿ ರಾಜ್ಯದ ಅಗತ್ಯತೆಗಳಿಗೆ ಒಳಪಟ್ಟು ಸದರಿ ಪ್ರದೇಶದ ಅಭಿವೃದ್ಧಿಗಾಗಿ ನಿಧಿಗಳ ನ್ಯಾಯಸಮ್ಮತ ಹಂಚಿಕೆಯನ್ನು ಮಾಡತಕ್ಕದ್ದು.

(ಇ) ಮುಖ್ಯಮಂತ್ರಿಗಳೊಂದಿಗೆ ಸಮಾಲೋಚಿಸಿ, ಖಾಸಗಿ ಕೈಗಾರಿಕೆಯು ಬಂಡವಾಳ ಹೂಡುವುದನ್ನು ಪ್ರೋತ್ಸಾಹಿಸಲು ಮತ್ತು ಆ ಪ್ರದೇಶದಲ್ಲಿ ಹೊಸ ಶೈಕ್ಷಣಿಕ ಸಂಸ್ಥೆಗಳನ್ನು ತೆರೆಯುವುದನ್ನು ಪ್ರೋತ್ಸಾಹಿಸಲು 12(ಇ) ಕಂಡಿಕೆಯಲ್ಲಿ ಯೋಜಿಸಲಾದಂತೆ ವಿಶೇಷ ಕಾರ್ಯನೀತಿಗಳನ್ನು ತರಲು ರಾಜ್ಯ ಸರ್ಕಾರಕ್ಕೆ ಸಲಹೆ ನೀಡುವುದು.

(ಎಫ್) ಅಂಥ ಸಲಹೆಯನ್ನು ಸ್ವೀಕರಿಸಿದ ತರುವಾಯ ಸರ್ಕಾರವು ಪ್ರಾದೇಶಿಕ ಅಸಮತೋಲನವನ್ನು ಸರಿಪಡಿಸಲು ಮತ್ತು ಸಾಕಷ್ಟು ಸಂಪನ್ಮೂಲಗಳನ್ನು, ಸಾಂಸ್ಥಿಕ ಬೆಂಬಲವನ್ನು ಒದಗಿಸಲು ಮತ್ತು ಅದನ್ನು ಅನುಷ್ಠಾನಗೊಳಿಸಲು ಮಾನವ ಶಕ್ತಿಯನ್ನು ಒದಗಿಸುವುದಕ್ಕೆ ಸಂಬಂಧಿಸಿದಂತೆ ಯುಕ್ತ ಕಾರ್ಯನೀತಿಗಳನ್ನು ತರಬಹುದು.

(ಜಿ) ಸರ್ಕಾರವು, ಖಾಸಗಿ ಹೂಡಿಕೆಯನ್ನು ವೃದ್ಧಿಸಲು ಮತ್ತು ಉತ್ತೇಜಿಸಲು ಈ ಅಧಿಸೂಚನೆಯಾದ ಆರು ತಿಂಗಳೊಳಗೆ ಆ ಪ್ರದೇಶದಲ್ಲಿ ಶೈಕ್ಷಣಿಕ, ತಾಂತ್ರಿಕ ಮತ್ತು ವೃತ್ತಿಪರ ಸಂಸ್ಥೆಗಳಿಗೆ ಸಂಬಂಧಿಸಿದಂಥ ಸಹಾಯ ಧನ ಕಾರ್ಯನೀತಿಯಲ್ಲಿ ವಿಶೇಷ ಅನುದಾನವನ್ನು ಪ್ರಕಟಿಸುವುದು;

(ಎಚ್) ಸರ್ಕಾರವು, ಈ ಅಧಿಸೂಚನೆಯಾದ ಆರು ತಿಂಗಳುಗಳೊಳಗೆ ಆ ಪ್ರದೇಶಕ್ಕೆ ಕೈಗಾರಿಕಾ ಮತ್ತು ಮೂಲಸೌಲಭ್ಯಯುತ ಮತ್ತು ಇತರ ಹೂಡಿಕೆಯನ್ನು ಪ್ರಕಟಿಸುವುದು.

**23. ವಾರ್ಷಿಕ ಹಣಕಾಸು ತ:ಖ್ತೆಯಲ್ಲಿ ನಿಧಿಯ ಹಂಚಿಕೆಯು ಪ್ರತಿಬಿಂಬಿತವಾಗತಕ್ಕದ್ದು.–** ರಾಜ್ಯಪಾಲರು ಮಾಡಿದ ನಿಧಿಯ ಹಂಚಿಕೆ ಅಥವಾ ವೆಚ್ಚಗಳು, ರಾಜ್ಯ ವಿಧಾನಮಂಡಲದ ಮುಂದೆ ಮಂಡಿಸಬೇಕಾದ ವಾರ್ಷಿಕ ಹಣಕಾಸು ತ:ಖ್ತೆಯಲ್ಲಿ ಪ್ರತಿಬಿಂಬಿತವಾಗತಕ್ಕದ್ದು ಮತ್ತು ಮೇಲೆ ಹೇಳಿದಂತೆ ವೆಚ್ಚಗಳಿಗೆ ಸಂಬಂಧಿಸಿದಂತೆ ಅಭಿವೃದ್ಧಿ ಚಟುವಟಿಕೆಗಳನ್ನು ರಾಜ್ಯ ಸರ್ಕಾರವು ಕೈಗೊಳ್ಳತಕ್ಕದ್ದು ಅಥವಾ ಕೈಗೊಳ್ಳುವಂತೆ ಮಾಡತಕ್ಕದ್ದು ಮತ್ತು ಹಾಗೆ ಹಂಚಿಕೆಯಾದ ನಿಧಿಯ ಮಂಡಲಿಯ ಆ ಪ್ರದೇಶದಿಂದ ರಾಜ್ಯದ ಇತರ ಭಾಗಗಳಿಗೆ ಮಾರ್ಗಪಲ್ಲಟವಾಗತಕ್ಕದ್ದಲ್ಲ:

ಪರಂತು,

(ಎ) ಮಂಡಲಿಯ ಪ್ರದೇಶದೊಳಗೆ ಮೇಲೆ ಹೇಳಿದಂತೆ ಕೈಗೊಳ್ಳಲಾದ ಅಭಿವೃದ್ಧಿ ಚಟುವಟಿಕೆಗಳ ಮೇಲೆ ಆಯವ್ಯಯ ನಿಯಮಗಳು ಮತ್ತು ಕಾರ್ಯವಿಧಾನದ ಅನುಸಾರವಾಗಿ ಪುನರ್‌–ವಿನಿಯೋಗವನ್ನು ಮಾಡಬಹುದು;

(ಬಿ) ಅಭಿವೃದ್ಧಿ ಚಟುವಟಿಕೆಗಳ ಅನುಷ್ಠಾನದಲ್ಲಿ, ಪ್ರಚಲಿತ ಗುಣಮಟ್ಟಗಳು ಅನುಗುಣವಾಗಿರತಕ್ಕದ್ದು; ಮತ್ತು

(ಸಿ) ಸಂಬಂಧಪಟ್ಟ ಆಡಳಿತಾತ್ಮಕ ಇಲಾಖೆಗಳು ಅಭಿವೃದ್ಧಿ ಚಟುವಟಿಕೆಗಳನ್ನು ಅನುಷ್ಠಾನವನ್ನು ಮುಂದುವರೆಸತಕ್ಕದ್ದು ಹಾಗೂ ಆಡಳಿತಾತ್ಮಕ ಮತ್ತು ತಾಂತ್ರಿಕ ಮೇಲ್ವಿಚಾರಣೆ ಹಾಗೂ ನಿಯಂತ್ರಣವನ್ನು ಚಲಾಯಿಸತಕ್ಕದ್ದು.

**24. ನಿಧಿಯನ್ನು ವಿನಿಯೋಗಿಸುವುದು.–** ಮಂಡಲಿಯ ನಿಧಿಯನ್ನು ಮತ್ತು ಮಂಡಲಿಯು ಹೊಂದಿರುವ ಅಥವಾ ವಹಿಸಿಕೊಂಡಿರುವ ಎಲ್ಲಾ ಸ್ವತ್ತನ್ನು ಈ ಆದೇಶದ ಆಡಳಿತಕ್ಕಾಗಿ ವಿನಿಯೋಗಿಸತಕ್ಕದ್ದು.

**25. ಮಂಡಲಿಗೆ ನಿರ್ದೇಶನ ನೀಡಲು ರಾಜ್ಯಪಾಲರ ಅಧಿಕಾರ.–** ಈ ಆದೇಶದಲ್ಲಿ ಅಥವಾ ತಾತ್ಕಾಲದಲ್ಲಿ ಜಾರಿಯಲ್ಲಿರುವ ಯಾವುದೇ ಇತರ ಕಾನೂನಿನಲ್ಲಿ ಏನೇ ಇದ್ದರೂ, ರಾಜ್ಯಪಾಲರು ಹಾಗೆ ಮಾಡುವುದು ಸಾರ್ವಜನಿಕ ಹಿತಾಸಕ್ತಿಯಿಂದ ಯುಕ್ತವಾಗಿದೆಯೆಂದು ಅಭಿಪ್ರಾಯಪಟ್ಟಲ್ಲಿ ಅಥವಾ ಮಂತ್ರಿ ಪರಿಷತ್ತಿನ ಸಲಹೆಯ ಮೇರೆಗೆ, ಅದು, ಸಾಮಾನ್ಯ ಅಥವಾ ವಿಶೇಷ ಆದೇಶದ ಮೂಲಕ, ಈ ಆದೇಶದ ಉದ್ದೇಶಗಳನ್ನು ನೆರವೇರಿಸಲು ಅವಶ್ಯವಾದ ಅಂಥ ನಿರ್ದೇಶನಗಳನ್ನು ಮಂಡಲಿಗೆ ನೀಡತಕ್ಕದ್ದು. ಅಂಥ ನಿರ್ದೇಶನಗಳನ್ನು ಪಾಲಿಸುವುದು ಮಂಡಲಿಯ ಕರ್ತವ್ಯವಾಗಿರತಕ್ಕದ್ದು.

**26. ಸಾಲಪಡೆಯುವ ಅಧಿಕಾರ.–** ರಾಜ್ಯ ಸರ್ಕಾರದ ಪೂರ್ವ ಮಂಜೂರಾತಿಯೊಂದಿಗೆ ಮತ್ತು ಈ ಬಗ್ಗೆ ನಿಯಮಿಸಬಹುದಾದ ಅಂಥ ಷರತ್ತುಗಳಿಗೆ ಒಳಪಟ್ಟು, ಮಂಡಲಿಯು, ಈ ಆದೇಶದ ಉದ್ದೇಶಗಳಿಗಾಗಿ ಅಗತ್ಯವಾದ ಯಾವುದೇ ಮೊತ್ತವನ್ನು ಸಾಲವಾಗಿ ಪಡೆಯಬಹುದು.

**27. ಲೆಕ್ಕಪತ್ರಗಳು ಮತ್ತು ಲೆಕ್ಕಪರಿಶೋಧನೆ.–** (1) ಮಂಡಲಿಯ ನಿಧಿಯ ಆದಾಯ ಮತ್ತು ವೆಚ್ಚದ ಲೆಕ್ಕಪತ್ರಗಳನ್ನು ಗೊತ್ತುಪಡಿಸಬಹುದಾದ ಅಂಥ ನಿಯಮಗಳಿಗೆ ಅನುಸಾರವಾಗಿ ಇಡತಕ್ಕದ್ದು.

(2) ಮಂಡಲಿಯು, ಗೊತ್ತುಪಡಿಸಬಹುದಾದ ಅಂಥ ನಮೂನೆಯಲ್ಲಿ ಲೆಕ್ಕಪತ್ರಗಳ ವಾರ್ಷಿಕ ವಿವರಣಾ ಪಟ್ಟಿಯನ್ನು ತಯಾರಿಸತಕ್ಕದ್ದು.

(3) ಮಂಡಲಿಯ ಲೆಕ್ಕಪತ್ರಗಳ ವಾರ್ಷಿಕ ಲೆಕ್ಕಪರಿಶೋಧನೆಯನ್ನು ರಾಜ್ಯ ಸರ್ಕಾರವು ನೇಮಕ ಮಾಡಬಹುದಾದಂಥ ಲೆಕ್ಕ ಪರಿಶೋಧಕರಿಂದ ಮಾಡಿಸತಕ್ಕದ್ದು.

(4) ಲೆಕ್ಕ ಪರಿಶೋಧಕರು ಲೆಕ್ಕ ಪರಿಶೋಧನೆಯ ಉದ್ದೇಶಗಳಿಗಾಗಿ ಮಂಡಲಿಯು ಎಲ್ಲ ಲೆಕ್ಕಪತ್ರಗಳನ್ನು ಮತ್ತು ಇತರ ದಾಖಲೆಗಳನ್ನು ನೋಡುವ ಅಧಿಕಾರವನ್ನು ಹೊಂದಿರತಕ್ಕದ್ದು.

(5) ಮಂಡಲಿಯು ಲೆಕ್ಕ ಪರಿಶೋಧನೆಗಾಗಿ ನಿಯಮಿಸಬಹುದಾದ ಅಂಥ ವೆಚ್ಚಗಳನ್ನು ತನ್ನ ನಿಧಿಯಿಂದ ಸಂದಾಯ ಮಾಡತಕ್ಕದ್ದು.

(6) ಲೆಕ್ಕ ಪರಿಶೋಧಕರ ವರದಿಯನ್ನು ಸ್ವೀಕರಿಸಿದ ತರುವಾಯ, ಸಾಧ್ಯವಾದಷ್ಟು ಬೇಗ, ಮಂಡಲಿಯು ಲೆಕ್ಕ ಪರಿಶೋಧಕರ ವರದಿಯ ಒಂದು ಪ್ರತಿಯೊಂದಿಗೆ ಲೆಕ್ಕಪತ್ರಗಳ ವಾರ್ಷಿಕ ವಿವರಣಾಪಟ್ಟಿಯ ಪ್ರತಿಯೊಂದನ್ನು ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು ಮತ್ತು ನಿಯಮಿಸಬಹುದಾದ ಅಂಥ ರೀತಿಯಲ್ಲಿ ಲೆಕ್ಕಪತ್ರಗಳ ವಾರ್ಷಿಕ ವಿವರಣಾ ಪಟ್ಟಿಯನ್ನು ಪ್ರಕಟಿಸುವಂತೆ ಮಾಡತಕ್ಕದ್ದು.

(7) ರಾಜ್ಯ ಸರ್ಕಾರವು, ಲೆಕ್ಕ ಪರಿಶೋಧಕರ ವರದಿಯನ್ನು ಪರಿಶೀಲಿಸಿದ ತರುವಾಯ, ತಾನು ಸೂಕ್ತವೆಂದು ಭಾವಿಸಬಹುದಾದಂಥ ನಿರ್ದೇಶನಗಳನ್ನು ಮಂಡಲಿಗೆ ನೀಡಬಹುದು ಮತ್ತು ಮಂಡಲಿಯು ಅಂಥ ನಿರ್ದೇಶನಗಳನ್ನು ಪಾಲಿಸತಕ್ಕದ್ದು.

ಅಧ್ಯಾಯ – V

**28. ವರದಿ.–** ಮಂಡಲಿಯು, ನಿಯಮಿಸಬಹುದಾದ ಅಂಥ ದಿನಾಂಕಗಳ ಒಳಗೆ ಅಂಥ ನಮೂನೆಯಲ್ಲಿ ಮತ್ತು ಅಂಥ ಕಾಲಾಂತರಗಳಲ್ಲಿ, ನಿಯಮಿಸಬಹುದಾದ ವರದಿಯನ್ನು ರಾಜ್ಯ ವಿಧಾನ ಮಂಡಲಕ್ಕೆ ಸಲ್ಲಿಸತಕ್ಕದ್ದು.

**29. ಮಂಡಲಿಯ ಆಯವ್ಯಯ.–** ಮಂಡಲಿಯು ಪ್ರತಿವರ್ಷ, ಮುಂದಿನ ಏಪ್ರಿಲ್ ತಿಂಗಳ ಮೊದಲನೇ ದಿನಾಂಕದಿಂದ ಪ್ರಾರಂಭವಾಗುವ ಹಣಕಾಸು ವರ್ಷಕ್ಕಾಗಿ ತನ್ನ ಆದಾಯ ಮತ್ತು ವೆಚ್ಚದ ಅಂದಾಜನ್ನು ನಿಯಮಿಸಬಹುದಾದ ಅಂಥ ದಿನಾಂಕಕ್ಕೆ ಮೊದಲು ಮತ್ತು ಅಂಥ ನಮೂನೆಯಲ್ಲಿ ಸಿದ್ಧಪಡಿಸತಕ್ಕದ್ದು ಮತ್ತು ಅದನ್ನು ರಾಜ್ಯ ಸರ್ಕಾರಕ್ಕೆ ಕಳುಹಿಸತಕ್ಕದ್ದು.

**30. ನಿಯಮಗಳು.–** ರಾಜ್ಯಪಾಲರು, ಆದೇಶದ ಮೂಲಕ ಕಾಲಕಾಲಕ್ಕೆ, ಸಂವಿಧಾನದ 371ಜೆ ಅನುಚ್ಛೇದದ (1)ನೇ ಖಂಡದ ಅಡಿಯಲ್ಲಿ ತನ್ನ ಕರ್ತವ್ಯಕ್ಕೆ ಸಂಬಂಧಿಸಿದಂತೆ ಕ್ರಮಬದ್ಧವಾದ ವ್ಯವಹಾರ ನಿರ್ವಹಣೆಗಾಗಿನ ಮತ್ತು ಈ ಆದೇಶದ ಉಪಬಂಧಗಳ ಪರಿಣಾಮಕಾರಿ ಅನುಷ್ಠಾನಕ್ಕಾಗಿಯ ನಿಯಮಗಳನ್ನೂ ಒಳಗೊಂಡಂತೆ ಅಂಥ ನಿಯಮಗಳನ್ನು ರಚಿಸಬಹುದು.

**31. ವಿನಿಯಮಗಳ ರಚನಾಧಿಕಾರ.–** ಮಂಡಲಿಯು ತನ್ನ ಸಭೆಗಳ ಮತ್ತು ಅನುಷ್ಠಾನ ಸಮಿತಿಗಳ ಸಭೆಗಳ ವ್ಯವಹಾರ ನಿರ್ವಹಣೆಗೆ ಸಂಬಂಧಿಸಿದಂತೆ ಪ್ರಕ್ರಿಯೆಗಳಿಗೆ ಮತ್ತು ಈ ಆದೇಶದ ಪರಿಣಾಮಕಾರಿ ಅನುಷ್ಠಾನಕ್ಕೆ ವಿನಿಯಮಗಳ ಮೂಲಕ ಉಪಬಂಧ ಕಲ್ಪಿಸಲು ಅಗತ್ಯಪಡಿಸಲಾದಂಥ ಇತರ ವಿಷಯಗಳಿಗೆ ಉಪಬಂಧ ಕಲ್ಪಿಸಲು ವಿನಿಯಮಗಳನ್ನು ರಚಿಸಬಹುದು.

**ಹೆಚ್.ಆರ್. ಭಾರದ್ವಾಜ್,**
ಕರ್ನಾಟಕ ರಾಜ್ಯಪಾಲರು

ಕರ್ನಾಟಕದ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಲ್.ಲೋಕನಾಥ**
ಸರ್ಕಾರದ ಜಂಟಿ ಕಾರ್ಯದರ್ಶಿ,
(ಹೈದ್ರಾಬಾದ್–ಕರ್ನಾಟಕ ವಿಶೇಷ ಕೋಶ) ಸಿಅಸುಇ.

**PR-51**
**SC-1000**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಡಿಪಿಎಆರ್ 06 ಪಿಎಲ್ಎಕ್ಸ್ 2012 ಬೆಂಗಳೂರು, ದಿನಾಂಕ: 06.11.2013.**

**ರಾಜ್ಯಪಾಲರು ಅನುಮೋದಿಸಿರುವ ಈ ಮುಂದಿನ ಆದೇಶವನ್ನು ಸಾರ್ವಜನಿಕ ಮಾಹಿತಿಗಾಗಿ ಈ ಮೂಲಕ ಪ್ರಕಟಿಸಲಾಗಿದೆ:–**

**ಕರ್ನಾಟಕ ಖಾಸಗಿ ಅನುದಾನರಹಿತ ಶೈಕ್ಷಣಿಕ ಸಂಸ್ಥೆಗಳ (ಹೈದ್ರಾಬಾದ್–ಕರ್ನಾಟಕ ಪ್ರದೇಶದಲ್ಲಿ ಪ್ರವೇಶ ನಿಯಂತ್ರಣ) ಆದೇಶ, 2013**

ಕರ್ನಾಟಕ (ಹೈದ್ರಾಬಾದ್–ಕರ್ನಾಟಕ ಪ್ರದೇಶಕ್ಕೆ ರಾಜ್ಯಪಾಲರ ವಿಶೇಷ ಹೊಣೆಗಾರಿಕೆ) ಆದೇಶ, 2013ರ 2ನೇ ಖಂಡದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕ ರಾಜ್ಯಪಾಲರು ಈ ಮೂಲಕ ಮುಂದಿನ ಆದೇಶವನ್ನು ಹೊರಡಿಸಿದ್ದಾರೆ, ಎಂದರೆ:–

**1. ಹೆಸರು, ಅನ್ವಯ ಮತ್ತು ಪ್ರಾರಂಭ.–** (1) ಈ ಆದೇಶವನ್ನು ಕರ್ನಾಟಕ ಶೈಕ್ಷಣಿಕ ಸಂಸ್ಥೆಗಳ (ಹೈದ್ರಾಬಾದ್–ಕರ್ನಾಟಕ ಪ್ರದೇಶದಲ್ಲಿ ಪ್ರವೇಶ ನಿಯಂತ್ರಣ) ಆದೇಶ, 2013 ಎಂದು ಕರೆಯತಕ್ಕದ್ದು.

(2) ಈ ಆದೇಶವು ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಕೋರ್ಸುಗಳಿಗೆ ಅನ್ವಯವಾಗತಕ್ಕದ್ದು.

(3) ಇದು, ಸರ್ಕಾರಿ ರಾಜ್ಯಪತ್ರದಲ್ಲಿ ಅದರ ಪ್ರಕಟಣೆಯ ದಿನದಂದು ಜಾರಿಗೆ ಬರತಕ್ಕದ್ದು.

**2. ಅರ್ಥ ವಿವರಣೆಗಳು.–** (1) ಈ ಆದೇಶದಲ್ಲಿ, ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,–

(ಎ) ಅಧ್ಯಯನದ ಯಾವುದೇ ಕೋರ್ಸಿನ ಸಂಬಂಧದಲ್ಲಿ "ಲಭ್ಯವಿರುವ ಸೀಟುಗಳು" ಎಂದರೆ, ರಾಜ್ಯ ಸರ್ಕಾರ ಅಥವಾ ವಿಶ್ವವಿದ್ಯಾಲಯ ಅಥವಾ ಹೈದ್ರಾಬಾದ್–ಕರ್ನಾಟಕ ಪ್ರದೇಶದಲ್ಲಿ ರಾಜ್ಯ ಸರ್ಕಾರದಿಂದ ಅಧಿಕೃತಗೊಳಿಸಲಾದ ಯಾವುದೇ ಇತರ ಪ್ರಾಧಿಕಾರವು ಹಂಚಿಕೆಗಾಗಿ ಯಾವುದೇ ಕಾಲಕ್ಕೆ ಪ್ರವೇಶಕ್ಕಾಗಿ ಆ ಕೋರ್ಸಿಗೆ ಒದಗಿಸಿರುವ ಸೀಟುಗಳ ಸಂಖ್ಯೆ.

(ಬಿ) ಯಾವುದೇ ವಿಶ್ವವಿದ್ಯಾಲಯ ಅಥವಾ ಇತರ ಶೈಕ್ಷಣಿಕ ಸಂಸ್ಥೆಯ ಸಂಬಂಧದಲ್ಲಿ "ಸ್ಥಳೀಯ ಪ್ರದೇಶ" ಎಂದರೆ, ಅಂಥ ವಿಶ್ವವಿದ್ಯಾಲಯಕ್ಕೆ ಅಥವಾ ಇತರ ಶೈಕ್ಷಣಿಕ ಸಂಸ್ಥೆಗೆ ಪ್ರವೇಶದ ಉದ್ದೇಶಗಳಿಗಾಗಿ ಈ ಆದೇಶದ 3ನೇ ಕಂಡಿಕೆಯಲ್ಲಿ ನಿರ್ದಿಷ್ಟಪಡಿಸಿದ ಹೈದ್ರಾಬಾದ್–ಕರ್ನಾಟಕ ಪ್ರದೇಶದ ಭಾಗ.

(ಸಿ) ಸ್ಥಳೀಯ ಪ್ರದೇಶದ ಸಂಬಂಧದಲ್ಲಿ "ಸ್ಥಳೀಯ ವ್ಯಕ್ತಿ" ಎಂದರೆ, ಸ್ಥಳೀಯ ಪ್ರದೇಶದ ಸಂಬಂಧದಲ್ಲಿ ಸ್ಥಳೀಯನೆಂದು ಈ ಆದೇಶದ 4ನೇ ಕಂಡಿಕೆಯ ಅಡಿಯಲ್ಲಿ ಅರ್ಹವಿರುವ ವ್ಯಕ್ತಿ.

(ಡಿ) "ಅನುಸೂಚಿ" ಎಂದರೆ ಈ ಆದೇಶಕ್ಕೆ ಲಗತ್ತಾದ ಅನುಸೂಚಿ.

(ಇ) "ರಾಜ್ಯಸರ್ಕಾರ" ಎಂದರೆ ಕರ್ನಾಟಕ ಸರ್ಕಾರ.

(ಎಫ್) "ಪ್ರದೇಶ" ಎಂದರೆ ಈ ಆದೇಶದ 3ನೇ ಕಂಡಿಕೆಯಲ್ಲಿ ನಿರ್ದಿಷ್ಟಪಡಿಸಿದ ಸ್ಥಳೀಯ ಪ್ರದೇಶವನ್ನು ಒಳಗೊಂಡ ಹೈದ್ರಾಬಾದ್–ಕರ್ನಾಟಕ ಪ್ರದೇಶ.

(ಜಿ) "ರಾಜ್ಯ-ವಾರು ಶೈಕ್ಷಣಿಕ ಸಂಸ್ಥೆ" ಎಂದರೆ, ಎರಡನೇ ಅನುಸೂಚಿಯ ಭಾಗ-IIರಲ್ಲಿ ನಿರ್ದಿಷ್ಟಪಡಿಸಿದ ಯಾವುದೇ ಕೋರ್ಸುಗಳನ್ನು ಒದಗಿಸುವ ಶೈಕ್ಷಣಿಕ ಸಂಸ್ಥೆ.

(ಹೆಚ್) "ರಾಜ್ಯ-ವಾರು ವಿಶ್ವವಿದ್ಯಾಲಯ" ಎಂದರೆ, ಎರಡನೇ ಅನುಸೂಚಿಯ ಭಾಗ-Iರಲ್ಲಿ ನಿರ್ದಿಷ್ಟಪಡಿಸಲಾದ ವಿಶ್ವವಿದ್ಯಾಲಯ.

(ಐ) ಈ ಅಧಿಸೂಚನೆಯಲ್ಲಿ **"ಅಧಿನಿವಾಸಿ"** ಎಂದರೆ, 4ನೇ ಕಂಡಿಕೆಯಲ್ಲಿ ಪರಿಭಾಷಿಸಲಾದಂತೆ, **"ಸ್ಥಳೀಯ ವ್ಯಕ್ತಿಗಳು"**.

(2) ಸಾಮಾನ್ಯ ಖಂಡಗಳ ಅಧಿನಿಯಮ, 1897 (1897ರ ಕೇಂದ್ರ ಅಧಿನಿಯಮ 10) ಈ ಆದೇಶದ ಅರ್ಥವಿವರಣೆಗಾಗಿ ಅನ್ವಯವಾಗತಕ್ಕದ್ದು.

3. **ಸ್ಥಳೀಯ ಪ್ರದೇಶ.**- ರಾಜ್ಯ ಸರ್ಕಾರದ ನಿಯಂತ್ರಣಕ್ಕೊಳಪಟ್ಟು ಮತ್ತು ಆ ಪ್ರದೇಶದಲ್ಲಿ ಇರುವ ವಿಶ್ವವಿದ್ಯಾಲಯಕ್ಕೆ ಮತ್ತು ವೃತ್ತಿ ತರಬೇತಿ ಸಂಸ್ಥೆಗಳನ್ನು ಒಳಗೊಂಡಂತೆ ಯಾವುದೇ ಇತರ ಶೈಕ್ಷಣಿಕ ಸಂಸ್ಥೆಗೆ (ರಾಜ್ಯವ್ಯಾಪಿ ವಿಶ್ವವಿದ್ಯಾಲಯ ಅಥವಾ ರಾಜ್ಯವ್ಯಾಪಿ ಶೈಕ್ಷಣಿಕ ಸಂಸ್ಥೆಗಳನ್ನು ಹೊರತುಪಡಿಸಿ) ಪ್ರವೇಶದ ಉದ್ದೇಶಕ್ಕಾಗಿ ಬೀದರ್, ಗುಲ್ಬರ್ಗಾ, ಯಾದಗಿರಿ, ರಾಯಚೂರು, ಕೊಪ್ಪಳ ಮತ್ತು ಬಳ್ಳಾರಿ ಜಿಲ್ಲೆಗಳನ್ನು ಒಳಗೊಂಡ ಹೈದ್ರಾಬಾದ್-ಕರ್ನಾಟಕ ಪ್ರದೇಶವೆಂದು ಕರೆಯಲಾಗುವ ರಾಜ್ಯದ ಭಾಗವನ್ನು ಸ್ಥಳೀಯ ಪ್ರದೇಶವೆಂದು ಪರಿಗಣಿಸತಕ್ಕದ್ದು.

4. **ಅಧಿನಿವಾಸಿ (ಸ್ಥಳೀಯ ವ್ಯಕ್ತಿಗಳು)**- ಯಾವುದೇ ಅಧ್ಯಯನ ಕೋರ್ಸ್‌ಗೆ ಪ್ರವೇಶ ಕೋರುವ ಅಭ್ಯರ್ಥಿಯನ್ನು,-

(ಎ) 1.1.2013ಕ್ಕೆ ಮೊದಲು ಅವನು ಸ್ಥಳೀಯ ಪ್ರದೇಶದಲ್ಲಿ ಹುಟ್ಟಿದ್ದರೆ, ಅಥವಾ ಅವನ ತಂದೆತಾಯಿಗಳು ಆ ಪ್ರದೇಶದಲ್ಲಿ ಹುಟ್ಟಿದ್ದರೆ, ಅಥವಾ ಅವನ ತಂದೆ ತಾಯಿಗಳು ಸಾಮಾನ್ಯವಾಗಿ 1.1.2013ಕ್ಕೆ ಮೊದಲು ಹತ್ತು ವರ್ಷಗಳಿಗಿಂತ ಕಡಿಮೆಯಿರದ ಅವಧಿವರೆಗೆ ಸ್ಥಳೀಯ ಪ್ರದೇಶದಲ್ಲಿ ವಾಸವಾಗಿದ್ದರೆ, ಮತ್ತು ಅವರ ಹೆಸರು ಮತದಾರರ ಪಟ್ಟಿಯಲ್ಲಾಗಲಿ ಅಥವಾ ಪಡಿತರ ಚೀಟಿಯಲ್ಲಾಗಲಿ ಇದ್ದರೆ; ಅಥವಾ ಸ್ಥಳೀಯ ಪ್ರದೇಶದಲ್ಲಿ 1.1.2013 ರಂದು ಅಥವಾ ಮೊದಲು ಯಾವುದೇ ಸ್ಥಿರಾಸ್ತಿಯನ್ನು ಹೊಂದಿದ್ದರೆ; ಅಥವಾ

(ಬಿ) ಪ್ರವೇಶಾತಿಗಾಗಿ ಕನಿಷ್ಠ ಶೈಕ್ಷಣಿಕ ವಿದ್ಯಾರ್ಹತೆಯನ್ನು ಗೊತ್ತುಪಡಿಸಲಾಗಿದ್ದ ಸಂದರ್ಭಗಳಲ್ಲಿ,-

(i) ಯಾವ ಶೈಕ್ಷಣಿಕ ವರ್ಷದಲ್ಲಿ ಅವನು ಹಾಜರಾಗಿದ್ದನೋ ಅಥವಾ ಸಂದರ್ಭಾನುಸಾರ ಸಂಬಂಧಪಟ್ಟ ಅರ್ಹತಾ ಪರೀಕ್ಷೆಗೆ ಮೊದಲು ಹಾಜರಾಗಿದ್ದನೋ ಆ ಶೈಕ್ಷಣಿಕ ವರ್ಷಕ್ಕೆ ಮುಕ್ತಾಯವಾಗುವ ಹತ್ತು ಕ್ರಮಾನುಗತ ಶೈಕ್ಷಣಿಕ ವರ್ಷಗಳಿಗಿಂತ ಕಡಿಮೆಯಿರದ ಅವಧಿಯವರೆಗೆ ಅಂಥ ಸ್ಥಳೀಯ ಪ್ರದೇಶದಲ್ಲಿರುವ ಶೈಕ್ಷಣಿಕ ಸಂಸ್ಥೆ ಅಥವಾ ಶೈಕ್ಷಣಿಕ ಸಂಸ್ಥೆಗಳಲ್ಲಿ ಅವನು ಅಧ್ಯಯನ ಮಾಡಿರಬೇಕು; ಅಥವಾ

(ii) ಅವನು ಯಾವ ಶೈಕ್ಷಣಿಕ ವರ್ಷದಲ್ಲಿ ಹಾಜರಾಗಿದ್ದನೋ ಅಥವಾ ಸಂದರ್ಭಾನುಸಾರ ಸಂಬಂಧಪಟ್ಟ ಅರ್ಹತಾ ಪರೀಕ್ಷೆಗೆ ಮೊದಲು ಹಾಜರಾಗಿದ್ದನೋ ಆ ಶೈಕ್ಷಣಿಕ ವರ್ಷಕ್ಕೆ ಮುಕ್ತಾಯವಾಗುವ ಹತ್ತು ಕ್ರಮಾನುಗತ ಶೈಕ್ಷಣಿಕ ವರ್ಷಗಳ ಇಡೀ ಅಥವಾ ಯಾವುದೇ ಭಾಗದ ಅವಧಿಯಲ್ಲಿ ಅವನು ಶೈಕ್ಷಣಿಕ ಸಂಸ್ಥೆಯಲ್ಲಿ ಅಧ್ಯಯನ ಮಾಡದಿದ್ದರೆ ಅವನು ಯಾವ ಅರ್ಹತಾ ಪರೀಕ್ಷೆಗೆ ಹಾಜರಾಗಿದ್ದನೋ ಅಥವಾ ಸಂದರ್ಭಾನುಸಾರ ಮೊದಲು ಹಾಜರಾಗಿದ್ದನೋ ಆ ಅರ್ಹತಾ ಪರೀಕ್ಷೆಯು ಪ್ರಾರಂಭವಾದ ದಿನಾಂಕದಿಂದ ನಿಕಟಪೂರ್ವದ ಹತ್ತು ವರ್ಷಗಳಿಗಿಂತ ಕಡಿಮೆಯಿರದ ಅವಧಿವರೆಗೆ ಆ ಸ್ಥಳೀಯ ಪ್ರದೇಶದಲ್ಲಿ ಅವನು ವಾಸವಾಗಿರಬೇಕು; ಅಥವಾ

(iii) ಅವನ ತಂದೆ ತಾಯಿಗಳಲ್ಲಿ ಯಾರೊಬ್ಬರು ಹತ್ತು ಕ್ರಮಾನುಗತ ಶೈಕ್ಷಣಿಕ ವರ್ಷಗಳ ಅವಧಿಗಾಗಿ ಅಂಥ ಸ್ಥಳೀಯ ಪ್ರದೇಶದಲ್ಲಿನ ಶೈಕ್ಷಣಿಕ ಸಂಸ್ಥೆಯಲ್ಲಿ ಅಧ್ಯಯನ ಮಾಡಿರಬೇಕು.

(ಸಿ) ಕನಿಷ್ಠ ಶೈಕ್ಷಣಿಕ ವಿದ್ಯಾರ್ಹತೆಯನ್ನು, ಪ್ರವೇಶಾತಿಗೆ ಗೊತ್ತುಪಡಿಸದಿದ್ದ ಸಂದರ್ಭದಲ್ಲಿ, ಅವನ ಅಥವಾ ಅವನ ತಂದೆ ತಾಯಿಗಳಲ್ಲಿ ಯಾರೊಬ್ಬರು ಯಾವ ದಿನಾಂಕಕ್ಕೆ ಆ ಸ್ಥಾನವನ್ನು ಪ್ರವೇಶಾತಿಗೆ ಅಧಿಸೂಚಿಸಲಾಗಿದೆಯೋ ಆ ದಿನಾಂಕದ ನಿಕಟ ಪೂರ್ವದ ಹತ್ತು ವರ್ಷಗಳಿಗಿಂತ ಕಡಿಮೆಯಿರದ ಅವಧಿವರೆಗೆ ಆ ಸ್ಥಳೀಯ ಪ್ರದೇಶದಲ್ಲಿ ವಾಸವಾಗಿರಬೇಕು; ಮತ್ತು

(ಡಿ) ಮಹಿಳೆಯ ಸಂದರ್ಭದಲ್ಲಿ, ಮೇಲಿನ (ಎ) ಯಿಂದ (ಸಿ) ವರೆಗಿನ ಖಂಡಗಳಲ್ಲಿ ನಿರ್ದಿಷ್ಟಪಡಿಸಲಾದ ಸ್ಥಳೀಯ ವ್ಯಕ್ತಿಯನ್ನು ಆಕೆಯು ವಿವಾಹವಾಗಿದ್ದರೆ,

-ಸ್ಥಳೀಯ ಪ್ರದೇಶಕ್ಕೆ ಸಂಬಂಧಿಸಿದ ಸ್ಥಳೀಯ ವ್ಯಕ್ತಿಯೆಂದು ಭಾವಿಸತಕ್ಕದ್ದು.

**ವಿವರಣೆ.**- ಈ ಕಂಡಿಕೆಯ ಉದ್ದೇಶಗಳಿಗಾಗಿ.-

(i) **"ಶೈಕ್ಷಣಿಕ ಸಂಸ್ಥೆ"** ಎಂದರೆ ರಾಜ್ಯ ಸರ್ಕಾರದಿಂದ ಮಾನ್ಯತೆ ಪಡೆದ ವಿಶ್ವವಿದ್ಯಾಲಯ ಅಥವಾ ಯಾವುದೇ ಶೈಕ್ಷಣಿಕ ಸಂಸ್ಥೆ, ವಿಶ್ವವಿದ್ಯಾಲಯ ಅಥವಾ ಇತರ ಸಕ್ಷಮ ಪ್ರಾಧಿಕಾರ;

(ii) ಅಧ್ಯಯನದ ಯಾವುದೇ ಕೋರ್ಸಿನ ಪ್ರವೇಶಕ್ಕೆ ಸಂಬಂಧಿಸಿದಂತೆ **"ಸಂಬಂಧಪಟ್ಟ ಅರ್ಹತಾ ಪರೀಕ್ಷೆ"** ಎಂದರೆ, ಅಂಥ ಅಧ್ಯಯನದ ಕೋರ್ಸಿಗೆ ಪ್ರವೇಶ ಪಡೆಯಲು ಉತ್ತೀರ್ಣರಾಗಬೇಕಾದ ಕನಿಷ್ಠ ಶೈಕ್ಷಣಿಕ ಅರ್ಹತಾ ಪರೀಕ್ಷೆ.

(iii) ಅಭ್ಯರ್ಥಿ ಅಥವಾ ಆತನ ತಂದೆ-ತಾಯಿ, ಈ ಕೆಳಗಿನ ಅವಧಿಯಲ್ಲಿ ಅಧ್ಯಯನ ಮಾಡಿದ ಕ್ರಮಾನುಗತ ಶೈಕ್ಷಣಿಕ ವರ್ಷಗಳನ್ನು ಪರಿಗಣನೆಗೆ ತೆಗೆದುಕೊಂಡು,-

(ಎ) ಆತನು, ಯಾವುದೇ ಪರೀಕ್ಷೆಯಲ್ಲಿ ಉತ್ತೀರ್ಣನಾಗಲು ವಿಫಲನಾದ ಕಾರಣಗಳಿಂದಾಗಿ ಆತನ ಅಧ್ಯಯನಕ್ಕೆ ಅಡಚಣೆಯಾದ ಯಾವುದೇ ಅವಧಿ; ಮತ್ತು

(ಬಿ) ರಾಜ್ಯವ್ಯಾಪಿ ವಿಶ್ವವಿದ್ಯಾಲಯ ಅಥವಾ ರಾಜ್ಯವ್ಯಾಪಿ ಶೈಕ್ಷಣಿಕ ಸಂಸ್ಥೆಯಲ್ಲಿ ಅವನು ಅಧ್ಯಯನ ಮಾಡಿದ ಯಾವುದೇ ಅವಧಿಯನ್ನು ಪರಿಗಣಿಸದೆ ಇರತಕ್ಕದ್ದಲ್ಲ.

(iv) ಯಾವುದೇ ಕೋರ್ಸಿನ ಅಧ್ಯಯನದ ಪ್ರವೇಶಾತಿಗಾಗಿ ಯಾವೊಬ್ಬ ಅಭ್ಯರ್ಥಿಯು, ಸ್ಥಳೀಯ ಪ್ರದೇಶದಲ್ಲಿ ವಾಸವಿರುವನೇ ಎಂಬ ಪ್ರಶ್ನೆಯನ್ನು, ಅಭ್ಯರ್ಥಿ ಅಥವಾ ಆತನ ತಂದೆ–ತಾಯಿ ವಾಸ್ತವವಾಗಿ ವಾಸಿಸುತ್ತಿದ್ದ ಸ್ಥಳಗಳಿಗೆ ಸಂಬಂಧಿಸಿ, ನಿರ್ಧರಿಸತಕ್ಕದ್ದು.

**5. ಪ್ರಮಾಣ ಪತ್ರಗಳನ್ನು ನೀಡಲು ಸಕ್ಷಮ ಪ್ರಾಧಿಕಾರ.**– (1) ಸರ್ಕಾರವು, ಸ್ಥಳೀಯ ವ್ಯಕ್ತಿಗಳಿಗೆ ಅರ್ಹತಾ ಪ್ರಮಾಣ ಪತ್ರಗಳನ್ನು ನೀಡಲು ಸಕ್ಷಮ ಪ್ರಾಧಿಕಾರವನ್ನು ಅಧಿಸೂಚಿಸಬಹುದು. ಸಕ್ಷಮ ಪ್ರಾಧಿಕಾರವು ಯುಕ್ತ ವಿಚಾರಣೆಯನ್ನು ನಡೆಸಿದ ನಂತರ ಅರ್ಹತಾ ಪ್ರಮಾಣಪತ್ರಗಳನ್ನು ನೀಡಲು ನಿಯಮಿಸಬಹುದಾದಂಥ ರೀತಿಯಲ್ಲಿ ನೋಟೀಸನ್ನು ಪ್ರಕಟಿಸಬಹುದು.

(2) ಸಕ್ಷಮ ಪ್ರಾಧಿಕಾರದ ಆದೇಶದಿಂದ ಬಾಧಿತನಾದ ಯಾವುದೇ ವ್ಯಕ್ತಿಯು (ಸಾರ್ವಜನಿಕ ಸದಸ್ಯ ಅಥವಾ ಅಭ್ಯರ್ಥಿ) ಅಂಥ ಅರ್ಹತಾ ಪ್ರಮಾಣಪತ್ರವನ್ನು ನೀಡಿದ ಮೂವತ್ತು ದಿನಗಳೊಳಗೆ ಜಿಲ್ಲಾಧಿಕಾರಿಗೆ ಅಥವಾ ಸರ್ಕಾರವು ಅಧಿಸೂಚಿಸಿದ ಯಾವುದೇ ಇತರ ಮೇಲ್ಮನವಿ ಪ್ರಾಧಿಕಾರಿಗೆ ಮೇಲ್ಮನವಿಯನ್ನು ಸಲ್ಲಿಸಬಹುದು.

(3) ಸಕ್ಷಮ ಪ್ರಾಧಿಕಾರ ಮತ್ತು ಮೇಲ್ಮನವಿ ಪ್ರಾಧಿಕಾರವು ಅವುಗಳನ್ನು ಸ್ವೀಕರಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗೆ ಅರ್ಜಿ ಅಥವಾ ಮೇಲ್ಮನವಿಯನ್ನು ವಿಲೇ ಮಾಡತಕ್ಕದ್ದು.

(4) ಅಧಿವಾಸವನ್ನು ರುಜುವಾತುಪಡಿಸಲು ಅಗತ್ಯಪಡಿಸಲಾದ 'ಜನನ ಪ್ರಮಾಣ ಪತ್ರ' ವನ್ನು ರಾಜ್ಯ ಸರ್ಕಾರವು ಗೊತ್ತುಪಡಿಸಿದ ರೀತಿಯಲ್ಲಿ ನೀಡತಕ್ಕದ್ದು.

(5) ಸರ್ಕಾರವು, ಅಧಿವಾಸದ ರುಜುವಾತಿಗಾಗಿ ಸಿಂಧುತ್ವ ಪ್ರಮಾಣಪತ್ರವನ್ನು ನೀಡುವ ಪ್ರಕ್ರಿಯೆಯನ್ನು ರೂಪಿಸತಕ್ಕದ್ದು.

**6. ಪ್ರಾದೇಶಿಕ ವಿಶ್ವವಿದ್ಯಾಲಯಗಳು ಮತ್ತು ಶೈಕ್ಷಣಿಕ ಸಂಸ್ಥೆಗಳಲ್ಲಿ ಮೀಸಲಾತಿ.**– (1) ಸ್ಥಳೀಯ ಪ್ರದೇಶದಲ್ಲಿರುವ ಒಂದನೇ ಅನುಸೂಚಿಯಲ್ಲಿ ಉಲ್ಲೇಖಿಸಲಾದ ಯಾವುದೇ ಪ್ರಾದೇಶಿಕ ವಿಶ್ವವಿದ್ಯಾಲಯ ಅಥವಾ ಶೈಕ್ಷಣಿಕ ಸಂಸ್ಥೆಯಲ್ಲಿನ ಅಧ್ಯಯನದ ಪ್ರತಿಯೊಂದು ಕೋರ್ಸಿನಲ್ಲಿ ಲಭ್ಯವಿರುವ ಸ್ಥಾನಗಳ ಶೇಕಡಾ ಎಪ್ಪತ್ತರಷ್ಟು ಪ್ರವೇಶಾತಿಯನ್ನು, ಅಂಥ ವಿಶ್ವವಿದ್ಯಾಲಯ ಅಥವಾ ಶೈಕ್ಷಣಿಕ ಸಂಸ್ಥೆಗೆ ಸಂಬಂಧಿಸಿದ ಸ್ಥಳೀಯ ವ್ಯಕ್ತಿಗಳಿಗೆ ಮೀಸಲಿರಿಸತಕ್ಕದ್ದು.

(2) (1)ನೇ ಉಪ–ಕಂಡಿಕೆಯ ಅಡಿಯಲ್ಲಿ ಸ್ಥಳೀಯ ವ್ಯಕ್ತಿಗಳಿಗೆ ಮೀಸಲಿರಿಸಬೇಕಾದ ಸ್ಥಾನಗಳ ಸಂಖ್ಯೆಯನ್ನು ನಿರ್ಧರಿಸುವಾಗ, ಸ್ಥಾನದ ಯಾವುದೇ ಅಪೂರ್ಣಾಂಕವನ್ನು ಒಂದು ಎಂದು ಲೆಕ್ಕಹಾಕತಕ್ಕದ್ದು:

ಪರಂತು, ಕನಿಷ್ಠ ಪಕ್ಷ ಒಂದು ಮೀಸಲು ಸ್ಥಾನವನ್ನು ಇಡತಕ್ಕದ್ದು.

**7. ರಾಜ್ಯವಾರು ವಿಶ್ವವಿದ್ಯಾಲಯಗಳು ಮತ್ತು ರಾಜ್ಯವಾರು ಶೈಕ್ಷಣಿಕ ಸಂಸ್ಥೆಗಳಲ್ಲಿ ಮೀಸಲಾತಿ.**– (1) ಎರಡನೇ ಅನುಸೂಚಿಯಲ್ಲಿ ಉಲ್ಲೇಖಿಸಲಾದ ರಾಜ್ಯ–ವಾರು ವಿಶ್ವವಿದ್ಯಾಲಯ ಅಥವಾ ರಾಜ್ಯವಾರು ಶೈಕ್ಷಣಿಕ ಸಂಸ್ಥೆಯಲ್ಲಿ ಕಲ್ಪಿಸಲಾದ ಪ್ರತಿಯೊಂದು ಅಧ್ಯಯನದ ವ್ಯಾಸಂಗ ಕ್ರಮದಲ್ಲಿ ಲಭ್ಯವಿರುವ ಸ್ಥಾನಗಳಲ್ಲಿ ಶೇಕಡಾ ಎಂಟರಷ್ಟನ್ನು ಹೈದ್ರಾಬಾದ್–ಕರ್ನಾಟಕ ಪ್ರದೇಶದ ಸ್ಥಳೀಯ ಅಭ್ಯರ್ಥಿಗಳಿಗೆ ಹಂಚಿಕೆ ಮಾಡುವುದು.

(2) (1)ನೇ ಉಪ ಕಂಡಿಕೆಯ ಅಡಿಯಲ್ಲಿ, ಸ್ಥಳೀಯ ವ್ಯಕ್ತಿಗಳ ಪರವಾಗಿ ಮೀಸಲಿರಿಸಬೇಕಾದ ಸ್ಥಾನಗಳ ಸಂಖ್ಯೆಯನ್ನು ನಿರ್ಧರಿಸುವಾಗ, ಸ್ಥಾನಗಳ ಯಾವುದೇ ಅಪೂರ್ಣಾಂಕವನ್ನು ಒಂದು ಎಂದು ಲೆಕ್ಕಹಾಕತಕ್ಕದ್ದು:

ಪರಂತು, ಕನಿಷ್ಠ ಪಕ್ಷ ಒಂದು ಸ್ಥಾನವನ್ನು ಮೀಸಲಿರಿಸದೆ ಇರತಕ್ಕದ್ದು.

(3) (1)ನೇ ಉಪಕಂಡಿಕೆಯ ಅಡಿಯಲ್ಲಿ, ಸ್ಥಳೀಯ ಪ್ರದೇಶಕ್ಕೆ ಸಂಬಂಧಿಸಿದ ಸ್ಥಳೀಯ ವ್ಯಕ್ತಿಗಳಿಗೆ ಸೇರಿದ ಮೀಸಲು ಸ್ಥಾನಗಳನ್ನು ಹಂಚಿಕೆ ಮಾಡುವಾಗ, ಸ್ಥಾನದ ಅಪೂರ್ಣಾಂಕಗಳನ್ನು ಒಂದು ಎಂದು ಲೆಕ್ಕ ಹಾಕುವ ಮೂಲಕ ಹೆಚ್ಚಿನ ಅಪೂರ್ಣಾಂಕವನ್ನು ಸರಿಹೊಂದಿಸತಕ್ಕದ್ದು ಮತ್ತು, ಅಗತ್ಯವಿದ್ದರೆ, ಉಳಿದಿರುವ ಹೆಚ್ಚಿನ ಅಪೂರ್ಣಾಂಕಗಳನ್ನು ಸಹ ಮತ್ತೊಂದಕ್ಕೆ ಎಂದು ಸರಿ ಹೊಂದಿಸತಕ್ಕದ್ದು; ಮತ್ತು ಹಾಗೆ ಲೆಕ್ಕ ಹಾಕಬೇಕಾದ ಅಪೂರ್ಣಾಂಕವನ್ನು, ಸಮಾನವಾಗಿರುವ ಅಪೂರ್ಣಾಂಕಗಳ ಕಾರಣದಿಂದ ಆಯ್ಕೆ ಮಾಡಲು ಸಾಧ್ಯವಾಗದಿದ್ದಲ್ಲಿ, ಆಯ್ಕೆಯನ್ನು ಚೀಟಿ ಎತ್ತುವ ಮೂಲಕ ಆರಿಸತಕ್ಕದ್ದು:

ಪರಂತು, ಸ್ಥಳೀಯ ಪ್ರದೇಶದ ಸಂಬಂಧದಲ್ಲಿ ಸ್ಥಳೀಯ ವ್ಯಕ್ತಿಗಳಿಗಾಗಿ ಕನಿಷ್ಠ ಒಂದು ಸ್ಥಾನ ಹಂಚಿಕೆ ಇರತಕ್ಕದ್ದು.

**8. ಮೀಸಲು ಖಾಲಿ ಸ್ಥಾನಗಳನ್ನು ತುಂಬುವುದು.**– ಸ್ಥಳೀಯ ಪ್ರದೇಶಕ್ಕೆ ಸಂಬಂಧಿಸಿದ ಸ್ಥಳೀಯ ವ್ಯಕ್ತಿಗಳಿಗೆ ಮೀಸಲಿಡಲಾದ ಅಥವಾ ಹಂಚಿಕೆ ಮಾಡಲಾದ ಯಾವುದೇ ಸ್ಥಾನಗಳನ್ನು ತುಂಬಲು ಸ್ಥಳೀಯ ಅಭ್ಯರ್ಥಿ ಲಭ್ಯವಾಗದಿದ್ದರೆ, ಅಂಥ ಸ್ಥಾನವನ್ನು ಅದನ್ನು ಮೀಸಲಿಡಲಾಗದಿದ್ದರೆ ಹೇಗೋ ಹಾಗೆ ಭರ್ತಿ ಮಾಡತಕ್ಕದ್ದು.

**9. ನಿರ್ದೇಶನಗಳನ್ನು ನೀಡಲು ಪ್ರಾಧಿಕೃತಗೊಳಿಸಲು ಅಧಿಕಾರ.**– (1) ರಾಜ್ಯಪಾಲರು, ಯಾವುದೇ ವಿಶ್ವವಿದ್ಯಾಲಯ ಅಥವಾ ರಾಜ್ಯ ಸರ್ಕಾರದ ನಿಯಂತ್ರಣಕ್ಕೊಳಪಟ್ಟ ಯಾವುದೇ ಇತರ ಶೈಕ್ಷಣಿಕ ಸಂಸ್ಥೆ ಮತ್ತು ವಿಶ್ವವಿದ್ಯಾಲಯ ಅಥವಾ ಇತರ ಶೈಕ್ಷಣಿಕ ಸಂಸ್ಥೆಗೆ ಈ ಆದೇಶವನ್ನು ಜಾರಿಗೆ ತರುವ ಉದ್ದೇಶಕ್ಕಾಗಿ ಅಗತ್ಯವೆನಿಸಬಹುದಾದಂಥ ಅಥವಾ ಯುಕ್ತವೆನಿಸುವಂಥ ನಿರ್ದೇಶನಗಳನ್ನು ಹೊರಡಿಸಲು ರಾಜ್ಯ ಸರ್ಕಾರವನ್ನು ಅಗತ್ಯಪಡಿಸಬಹುದು.

(2) ರಾಜ್ಯ ಸರ್ಕಾರವು, (1)ನೇ ಉಪ–ಕಂಡಿಕೆಯ ಮೇರೆಗೆ ಯಾವುದೇ ನಿರ್ದೇಶನಗಳನ್ನು ಹೊರಡಿಸುವ ಉದ್ದೇಶಕ್ಕಾಗಿ ಅಥವಾ ಉಪ–ಕಂಡಿಕೆಯ ಮೇರೆಗೆ ಹೊರಡಿಸಲಾದ ತನ್ನ ನಿರ್ದೇಶನಗಳನ್ನು ಪಾಲಿಸಲಾಗುತ್ತಿದೆಯೆಂಬುದನ್ನು ತಾನು ಮನದಟ್ಟು ಮಾಡಿಕೊಳ್ಳಲು, ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದಂಥ ಮಾಹಿತಿ, ವರದಿ ಅಥವಾ ವಿವರಗಳನ್ನು ತಮಗೆ ಒದಗಿಸುವಂತೆ ವಿಶ್ವವಿದ್ಯಾಲಯ ಅಥವಾ ರಾಜ್ಯ ಸರ್ಕಾರದ ನಿಯಂತ್ರಣಕ್ಕೊಳಪಟ್ಟ ಯಾವುದೇ ಇತರ ಶೈಕ್ಷಣಿಕ ಸಂಸ್ಥೆಗಳನ್ನು ಲಿಖಿತದಲ್ಲಿ ಆದೇಶದ ಮೂಲಕ ಅಗತ್ಯಪಡಿಸಬಹುದು ಮತ್ತು ವಿಶ್ವವಿದ್ಯಾಲಯ ಅಥವಾ ಇತರ ಶೈಕ್ಷಣಿಕ ಸಂಸ್ಥೆಯು ಅಂಥ ಆದೇಶವನ್ನು ಪಾಲಿಸತಕ್ಕದ್ದು.

**10. ಆದೇಶವು, ಅಧ್ಯಾರೋಹಿ ಪರಿಣಾಮ ಹೊಂದುವುದು.–** ಈ ಆದೇಶದ ಉಪಬಂಧವು, ಯಾವುದೇ ವಿಶ್ವವಿದ್ಯಾಲಯ ಅಥವಾ ರಾಜ್ಯ ಸರ್ಕಾರದ ನಿಯಂತ್ರಣಕ್ಕೊಳಪಟ್ಟ ಯಾವುದೇ ವಿಶ್ವವಿದ್ಯಾಲಯ ಅಥವಾ ಯಾವುದೇ ಇತರ ಶೈಕ್ಷಣಿಕ ಸಂಸ್ಥೆಗೆ ಪ್ರವೇಶಾತಿಗಳಿಗೆ ಸಂಬಂಧಿಸಿದ ಯಾವುದೇ ಶಾಸನ, ಅಧ್ಯಾದೇಶ, ನಿಯಮ, ವಿನಿಯಮ ಅಥವಾ ಇತರ ಆದೇಶದಲ್ಲಿ (ಈ ಆದೇಶದ ಪ್ರಾರಂಭಕ್ಕೆ ಮೊದಲು ಮಾಡಿರಲಿ ಅಥವಾ ನಂತರ ಮಾಡಿರಲಿ) ಏನೇ ಒಳಗೊಂಡಿದ್ದರೂ, ಅಧ್ಯಾರೋಹಿ ಪರಿಣಾಮವನ್ನು ಹೊಂದಿರತಕ್ಕದ್ದು.

**11. ಸಂದೇಹಗಳ ನಿವಾರಣೆ.–** ತೊಂದರೆಗಳನ್ನು ನಿವಾರಿಸಲು, ಈ ಆದೇಶದಲ್ಲಿರುವುದು ಯಾವುದೂ, ಅಂಥ ಉಪಬಂಧಗಳು ಈ ಆದೇಶಕ್ಕೆ ಅಸಂಗತವಾಗದಿರುವಷ್ಟರಮಟ್ಟಿಗೆ ಮಹಿಳೆ, ಸಾಮಾಜಿಕವಾಗಿ ಮತ್ತು ಶೈಕ್ಷಣಿಕವಾಗಿ ಹಿಂದುಳಿದ ನಾಗರಿಕ ವರ್ಗ, ಅನುಸೂಚಿತ ಜಾತಿಗಳು ಮತ್ತು ಅನುಸೂಚಿತ ಪಂಗಡದವರನ್ನು ಯಾವುದೇ ವಿಶ್ವವಿದ್ಯಾಲಯ ಅಥವಾ ಇತರ ಶೈಕ್ಷಣಿಕ ಸಂಸ್ಥೆಗಳಿಗೆ ಪ್ರವೇಶಾತಿ ಮಾಡಿಕೊಳ್ಳುವ ವಿಷಯದಲ್ಲಿನ ಮೀಸಲಾತಿಗೆ ಸಂಬಂಧಿಸಿದಂತೆ, ರಾಜ್ಯ ಸರ್ಕಾರ ಅಥವಾ ಇತರ ಸಕ್ಷಮ ಪ್ರಾಧಿಕಾರವು ಮಾಡಲಾದ ಯಾವುದೇ ಉಪಬಂಧಗಳ (ಈ ಆದೇಶದ ಪ್ರಾರಂಭಕ್ಕೆ ಮೊದಲು ಮಾಡಿರಲಿ ಅಥವಾ ನಂತರ ಮಾಡಿರಲಿ) ಕಾರ್ಯಾಚರಣೆಗೆ ಬಾಧಕವಾಗತಕ್ಕದ್ದಲ್ಲವೆಂದು, ಈ ಮೂಲಕ ಘೋಷಿಸಲಾಗಿದೆ.

**12. ಅನುಸೂಚಿಯನ್ನು ತಿದ್ದುಪಡಿ ಮಾಡುವ ಅಧಿಕಾರ.–** ರಾಜ್ಯಸರ್ಕಾರವು, ಅನುಸೂಚಿಗಳಲ್ಲಿರುವ ಯಾವುದೇ ವಿಷಯವನ್ನು ಸೇರಿಸುವ ಅಥವಾ ತೆಗೆದುಹಾಕುವ ಅಥವಾ ತಿದ್ದುಪಡಿ ಮಾಡುವ ಅಧಿಕಾರವನ್ನು ಹೊಂದಿರತಕ್ಕದ್ದು.

**ಒಂದನೇ ಅನುಸೂಚಿ**

**[ಕಂಡಿಕೆ 1(2) ನೋಡಿ]**

(ಎ) ಸರ್ಕಾರದಿಂದ ಅಧಿಸೂಚಿತವಾದಂತೆ, ಖಾಸಗಿ ಅನುದಾನರಹಿತ ವಿಶ್ವವಿದ್ಯಾಲಯ, ಭಾವಿತ ವಿಶ್ವವಿದ್ಯಾಲಯಗಳು ಅಥವಾ ಶೈಕ್ಷಣಿಕ ಸಂಸ್ಥೆಗಳು ಒದಗಿಸುವ ಸ್ನಾತಕೋತ್ತರದವರೆಗಿನ ಮತ್ತು ಅದನ್ನು ಒಳಗೊಂಡ ಎಲ್ಲಾ ಕೋರ್ಸುಗಳು.

(ಬಿ) ಕಾರ್ಮಿಕ ಮಂತ್ರಾಲಯ ಅಥವಾ ಯಾವುದೇ ಇತರ ಇಲಾಖೆ ಅಥವಾ ಕೈಗಾರಿಕಾ ತರಬೇತಿ ಕೇಂದ್ರಗಳ ಮತ್ತು ಪಾಲಿಟೆಕ್ನಿಕ್‌ಗಳ ಮೂಲಕ ಅಥವಾ ಯಾವುದೇ ಖಾಸಗಿ (ಹಂಚಿಕೆಗಾಗಿ ಸರ್ಕಾರಕ್ಕೆ ನೀಡಲಾದ ಸೀಟುಗಳು) ಅಥವಾ ಅನುದಾನಿತ ಸಂಸ್ಥೆಗಳ ಮೂಲಕ ಒದಗಿಸಲಾಗುವ ವೃತ್ತಿ ತಾಂತ್ರಿಕ ಕೋರ್ಸುಗಳು.

(ಸಿ) ಆ ಪ್ರದೇಶದಲ್ಲಿನ ಎಲ್ಲಾ ಖಾಸಗಿ ಅನುದಾನರಹಿತ ವೈದ್ಯಕೀಯ ಕಾಲೇಜುಗಳು, ದಂತ ವೈದ್ಯಕೀಯ ಕಾಲೇಜುಗಳು, ಎಂಜಿನಿಯರಿಂಗ್ ಕಾಲೇಜುಗಳು ಅಥವಾ ಯಾವುದೇ ತಾಂತ್ರಿಕ, ವೃತ್ತಿಪರ, ವೃತ್ತಿ ಅಥವಾ ಉನ್ನತ ಶಿಕ್ಷಣ ಸಂಸ್ಥೆ.

**ಎರಡನೇ ಅನುಸೂಚಿ**

**(ಕಂಡಿಕೆ 1(ಎಫ್)ಮತ್ತು(ಜಿ) ನೋಡಿ)**

**ಭಾಗ–I**

**ರಾಜ್ಯ ವ್ಯಾಪಿ ವಿಶ್ವವಿದ್ಯಾಲಯಗಳು**

ರಾಜ್ಯ ಸರ್ಕಾರವು ಕಾಲಕಾಲಕ್ಕೆ ಅಧಿಸೂಚಿಸಲಾದಂತೆ.

**ಭಾಗ–II**

**ರಾಜ್ಯವಾರು ಶೈಕ್ಷಣಿಕ ಸಂಸ್ಥೆಗಳು**

ಈ ಮುಂದಿನ ಕೋರ್ಸುಗಳನ್ನು ನೀಡುವ ಮತ್ತು ಈ ಅನುಸೂಚಿಯ ಭಾಗ–I ರಲ್ಲಿ ಉಲ್ಲೇಖಿಸಲಾದ ರಾಜ್ಯವಾರು ವಿಶ್ವವಿದ್ಯಾಲಯಗಳ ಮೂಲಕವಾಗಲಿ ಅಥವಾ ಮೊದಲನೇ ಅನುಸೂಚಿಯಲ್ಲಿ ಉಲ್ಲೇಖಿಸಲಾದ ರಾಜ್ಯವಾರೇತರ ವಿಶ್ವವಿದ್ಯಾಲಯದ ಮೂಲಕವಾಗಲಿ ಅಥವಾ ಪದವಿ ಪೂರ್ವ ಶಿಕ್ಷಣ ಮಂಡಲಿ ಅಥವಾ ರಾಷ್ಟ್ರೀಯ ವೃತ್ತಿಪರ ತರಬೇತಿ ಪರಿಷತ್ತಿನ (NCVT) ಪಠ್ಯಕ್ರಮದ ಪ್ರಕಾರ ಕೋರ್ಸುಗಳನ್ನು ನೀಡುತ್ತಿರುವ ಕೈಗಾರಿಕಾ ತರಬೇತಿ ಸಂಸ್ಥೆ ಮೂಲಕವಾಗಲಿ ಸಂಯೋಜಿತವಾದ ಖಾಸಗಿ (ಹಂಚಿಕೆಗಾಗಿ ಸರ್ಕಾರಕ್ಕೆ ನೀಡಲಾದ ಸೀಟುಗಳು) ಅಥವಾ ಸಾರ್ವಜನಿಕ ಸಂಸ್ಥೆಗಳು.

1. ಇಂಜಿನಿಯರಿಂಗ್
2. ದಂತ ವೈದ್ಯಕೀಯ
3. ವೈದ್ಯಕೀಯ
4. ಔಷಧಿ ವೈದ್ಯಕೀಯ
5. ಫಿಜಿಯೋ ತೆರಪಿ
6. ನರ್ಸಿಂಗ್
7. ದೈಹಿಕ ಶಿಕ್ಷಣ
8. ಮ್ಯಾನೇಜ್‌ಮೆಂಟ್ ಅಥವಾ ಸರ್ಕಾರವು ಅಧಿಸೂಚಿಸುವ ಯಾವುದೇ ಇತರ ಕೋರ್ಸುಗಳು
9. ರಾಜ್ಯದ ರಾಜಧಾನಿಯಾದ ಬೆಂಗಳೂರಿನ ಪ್ರದೇಶದಲ್ಲಿ ವಿಶ್ವವಿದ್ಯಾಲಯ ಅನುದಾನ ಆಯೋಗ ಅಥವಾ ಅಖಿಲ ಭಾರತ ತಾಂತ್ರಿಕ ಶಿಕ್ಷಣ ಪರಿಷತ್ತು ಅಥವಾ ಭಾರತದ ವೈದ್ಯಕೀಯ ಪರಿಷತ್ತು ಮಾನ್ಯತೆ ನೀಡಿದ ಯಾವುದೇ ಇತರ ವಿಷಯವನ್ನು ಕಾಲೇಜು ಅಥವಾ ಸಂಸ್ಥೆ ಅಥವಾ ಭಾವಿತ ವಿಶ್ವವಿದ್ಯಾಲಯ

10. ಕರ್ನಾಟಕದಲ್ಲಿ ಮತ್ತು ಸರ್ಕಾರವು ಅಧಿಸೂಚಿಸಿದ ಎಲ್ಲಾ ಸಂಸ್ಥೆಗಳು ಬೋಧಿಸದೇ ಇರುವ ಯಾವುದೇ ಇತರ ವಿಷಯ/ವೃತ್ತಿಪರ ಕೋರ್ಸು

11. ಕರ್ನಾಟಕದಲ್ಲಿ ಮತ್ತು ಸರ್ಕಾರವು ಅಧಿಸೂಚಿಸಿದ ಎಲ್ಲಾ ಕೈಗಾರಿಕಾ ತರಬೇತಿ ಸಂಸ್ಥೆಗಳು ಬೋಧಿಸದೇ ಇರುವ ಯಾವುದೇ ವಾಣಿಜ್ಯ

12. ಸರ್ಕಾರವು ಅಧಿಸೂಚಿಸಿದ ಯಾವುದೇ ಇತರ ಸಂಸ್ಥೆ ಅಥವಾ ಅಧ್ಯಯನ ವಿಭಾಗ ಅಥವಾ ಅವೆರಡು.

**ಹೆಚ್.ಆರ್. ಭಾರದ್ವಾಜ್,**

ಕರ್ನಾಟಕ ರಾಜ್ಯಪಾಲರು

ಕರ್ನಾಟಕದ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**PR-53**

**SC-2000**

**ಕೆ.ಎಲ್.ಲೋಕನಾಥ**

ಸರ್ಕಾರದ ಜಂಟಿ ಕಾರ್ಯದರ್ಶಿ,

(ಹೈದ್ರಾಬಾದ್-ಕರ್ನಾಟಕ ವಿಶೇಷ ಕೋಶ) ಸಿಅಸುಇ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಡಿಪಿಎಆರ್ 06 ಪಿಎಲ್‌ಎಕ್ಸ್ 2012 ಬೆಂಗಳೂರು, ದಿನಾಂಕ: 06.11.2013.**

**ರಾಜ್ಯಪಾಲರು ಅನುಮೋದಿಸಿರುವ ಈ ಮುಂದಿನ ಆದೇಶವನ್ನು ಸಾರ್ವಜನಿಕ ಮಾಹಿತಿಗಾಗಿ ಈ ಮೂಲಕ ಪ್ರಕಟಿಸಲಾಗಿದೆ:-**

**ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದ್ರಾಬಾದ್-ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ಆದೇಶ, 2013**

ಕರ್ನಾಟಕ (ಹೈದ್ರಾಬಾದ್-ಕರ್ನಾಟಕ ಪ್ರದೇಶಕ್ಕೆ ರಾಜ್ಯಪಾಲರ ವಿಶೇಷ ಹೊಣೆಗಾರಿಕೆ) ಆದೇಶ 2013ರ 2ನೇ ಖಂಡದ ಮೂಲಕ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಕರ್ನಾಟಕದ ರಾಜ್ಯಪಾಲರು, ಕರ್ನಾಟಕ ರಾಜ್ಯಕ್ಕೆ ಸಂಬಂಧಿಸಿದಂತೆ ಈ ಮೂಲಕ ಈ ಮುಂದಿನ ಆದೇಶವನ್ನು ಹೊರಡಿಸಿದ್ದಾರೆ, ಎಂದರೆ:-

**1. ಹೆಸರು ಮತ್ತು ಪ್ರಾರಂಭ.-** (1) ಈ ಆದೇಶವನ್ನು ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದ್ರಾಬಾದ್-ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ಆದೇಶ, 2013 ಎಂದು ಕರೆಯತಕ್ಕದ್ದು.

(2) ಇದು, ರಾಜ್ಯಪತ್ರದಲ್ಲಿ ಪ್ರಕಟಗೊಂಡ ದಿನಾಂಕದಿಂದ ಜಾರಿಗೆ ಬರತಕ್ಕದ್ದು.

**2. ಅರ್ಥ ವಿವರಣೆಗಳು.-** (1) ಈ ಆದೇಶದಲ್ಲಿ ಸಂದರ್ಭವು ಅನ್ಯಥಾ ಅಗತ್ಯಪಡಿಸಿದ ಹೊರತು,-

(ಎ) "ನಿಕಾಯ ಅಥವಾ ಸಂಸ್ಥೆ" ಎಂದರೆ, ರಾಜ್ಯ ಸರ್ಕಾರವು, ಸ್ಥಾಪಿಸಿದ ಮತ್ತು ನಿರ್ವಹಿಸಿದ ಯಾವುದೇ ಶಾಸನಬದ್ಧ ಅಥವಾ ಶಾಸನಬದ್ಧವಲ್ಲದ ನಿಕಾಯ ಅಥವಾ ಸಂಸ್ಥೆ;

(ಬಿ) "ನೇರ ನೇಮಕಾತಿ" ಎಂಬುದು, ಖಾಯಂ ಆಧಾರದ ಮೇಲೆ ಮಾಡಲಾದ ಎಲ್ಲ ನೇಮಕಾತಿಗಳನ್ನು ಒಳಗೊಳ್ಳುತ್ತದೆ ಮತ್ತು ಈ ಕೆಳಕಂಡವುಗಳನ್ನು ಹೊರತು ಪಡಿಸುತ್ತದೆ:-

(i) ಕರ್ನಾಟಕ ಸಿವಿಲ್ ಸೇವಾ (ಅನುಕಂಪ ಆಧಾರಿತ ನೇಮಕಾತಿ) ನಿಯಮಗಳು, 1996ರ, ಅಥವಾ

(ii) ಕರ್ನಾಟಕ ಸಿವಿಲ್ ಸೇವಾ (ಅನುಸೂಚಿತ ಜಾತಿ ಅಥವಾ ಅನುಸೂಚಿತ ಪಂಗಡಗಳಿಗೆ ಸೇರಿದ ವ್ಯಕ್ತಿಗಳ ಕುಟುಂಬದ ಸದಸ್ಯರ ಅನುಕಂಪ ಆಧಾರಿತ ನೇಮಕಾತಿ) (ವಿಶೇಷ) ನಿಯಮಗಳು, 1999ರ; ಅಥವಾ

(iii) ಕರ್ನಾಟಕ ಸಿವಿಲ್ ಸೇವಾ (ಕೋಮು ಗಲಭೆಗಳಿಂದ ಮೃತರಾದ ವ್ಯಕ್ತಿಗಳ ಕುಟುಂಬದ ಸದಸ್ಯರ ಅನುಕಂಪದ ಆಧಾರಿತ ನೇಮಕಾತಿ) (ವಿಶೇಷ) ನಿಯಮಗಳು, 1993, ಅಥವಾ

(iv) ಈ ಆದೇಶವು ಪ್ರಾರಂಭವಾಗುವ ಮೊದಲು ತಾತ್ಕಾಲಿಕ ಆಧಾರದ ಮೇಲೆ ಹುದ್ದೆಗಳನ್ನು ಹೊಂದಿರುವ ವ್ಯಕ್ತಿಗಳ ಸೇವೆಗಳನ್ನು ಸಕ್ರಮಗೊಳಿಸಲು ಅವಕಾಶವನ್ನು ನೀಡಿ, ರಾಜ್ಯ ಸರ್ಕಾರವು ಅನುಮೋದಿಸಿದ ಯಾವುದೇ ಯೋಜನೆ.

(ಸಿ) ಯಾವುದೇ ಸ್ಥಳೀಯ ವೃಂದಕ್ಕೆ ಸಂಬಂಧಿಸಿದಂತೆ "ಸ್ಥಳೀಯ ಪ್ರದೇಶ" ಎಂದರೆ, ಹೈದ್ರಾಬಾದ್-ಕರ್ನಾಟಕ ಪ್ರದೇಶದ ಭಾಗ;

(ಡಿ) "ಸ್ಥಳೀಯ ಪ್ರಾಧಿಕಾರ" ಎಂದರೆ, ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ, 1993ರ ಅಡಿಯಲ್ಲಿ ರಚಿತವಾದ ಜಿಲ್ಲಾ ಪಂಚಾಯತಿಗಳು, ತಾಲ್ಲೂಕು ಪಂಚಾಯತಿಗಳು, ಗ್ರಾಮ ಪಂಚಾಯತಿಗಳು ಮತ್ತು ಕರ್ನಾಟಕ ಪೌರನಿಗಮಗಳ ಅಧಿನಿಯಮ, 1976ರ ಅಥವಾ ಕರ್ನಾಟಕ ಪೌರಸಭೆಗಳ ಅಧಿನಿಯಮ, 1964ರ ಅಡಿಯಲ್ಲಿ ರಚಿತವಾದ ಪೌರನಿಗಮಗಳು, ಪುರಸಭೆಗಳು ಮತ್ತು ಪಟ್ಟಣ ಪಂಚಾಯತಿಗಳು ಮತ್ತು ರಾಜ್ಯ ಸರ್ಕಾರದ ಅಥವಾ ಮೇಲೆ ಉಲ್ಲೇಖಿಸಲಾದ ಎಲ್ಲಾ ಸಂಸ್ಥೆಗಳಿಗೆ ಸದೃಶವಾದ ಉದ್ದೇಶಗಳನ್ನು ಈಡೇರಿಸುವುದಕ್ಕಾಗಿ ನಂತರದ ದಿನಗಳಲ್ಲಿ ಸೃಜಿಸಬಹುದಾದ ಯಾವುದೇ ಇತರ ಹೊಸ ಕಚೇರಿಯ ನಿಯಂತ್ರಣಕ್ಕೊಳಪಟ್ಟಿರುವ ಯಾವುದೇ ಸ್ಥಳೀಯ ಪ್ರಾಧಿಕಾರವನ್ನು ಒಳಗೊಳ್ಳುತ್ತದೆ;

(ಇ) "ಸ್ಥಳೀಯ ವೃಂದ" ಎಂದರೆ, ರಾಜ್ಯ ಸರ್ಕಾರದ ಅಥವಾ 3ನೇ ಕಂಡಿಕೆಗನುಸಾರವಾಗಿ ವ್ಯವಸ್ಥೆಗೊಳಿಸಲಾದ ಯಾವುದೇ ಸ್ಥಳೀಯ ಪ್ರಾಧಿಕಾರದ ಅಥವಾ ನಿಕಾಯ ಅಥವಾ ಸಂಸ್ಥೆಯ ಅಡಿಯಲ್ಲಿ ಬರುವ ಯಾವುದೇ ಸ್ಥಳೀಯ ವೃಂದ;

(ಎಫ್) "ಸ್ಥಳೀಯ ವ್ಯಕ್ತಿ" ಎಂದರೆ, ಯಾವುದೇ ಸ್ಥಳೀಯ ಪ್ರದೇಶಕ್ಕೆ ಸಂಬಂಧಿಸಿದಂತೆ ಅಂಥ ಸ್ಥಳೀಯ ವ್ಯಕ್ತಿಗಳೆಂದು 6ನೇ ಕಂಡಿಕೆಯ ಅಡಿಯಲ್ಲಿ ಅರ್ಹನಾಗಿರುವ ವ್ಯಕ್ತಿ;

(ಜಿ) "ಸ್ಥಳಿಯೇತರ ವ್ಯಕ್ತಿ" ಎಂದರೆ, ಸ್ಥಳೀಯ ವ್ಯಕ್ತಿಗಳನ್ನು ಹೊರತುಪಡಿಸಿದ ವ್ಯಕ್ತಿಗಳು;

(ಎಚ್) "ಪ್ರದೇಶ" ಅಥವಾ "ಹೈದ್ರಾಬಾದ್–ಕರ್ನಾಟಕ ಪ್ರದೇಶ"ವು ಬೀದರ್, ಗುಲಬರ್ಗಾ, ರಾಯಚೂರು, ಕೊಪ್ಪಳ, ಯಾದಗಿರಿ ಮತ್ತು ಬಳ್ಳಾರಿ ಜಿಲ್ಲೆಗಳ ಕಂದಾಯ ಜಿಲ್ಲೆಗಳನ್ನು ಒಳಗೊಳ್ಳತಕ್ಕದ್ದು;

(ಐ) "ರಾಜ್ಯ ಮಟ್ಟದ ಕಚೇರಿ ಅಥವಾ ಸಂಸ್ಥೆ" ಎಂದರೆ, ರಾಜ್ಯಕ್ಕೆ ಸಮಗ್ರವಾಗಿ ಸೇವೆ ಸಲ್ಲಿಸುತ್ತಿರುವ ಅಥವಾ ಅಧಿಕಾರವ್ಯಾಪ್ತಿಯ, ರಾಜ್ಯಕ್ಕೆ ಸಮಗ್ರವಾಗಿ ವಿಸ್ತಾರವಾಗುವ ಅಥವಾ ರಾಜ್ಯದ ರಾಜಧಾನಿ ಪ್ರದೇಶಕ್ಕೆ ಸೇವೆ ಸಲ್ಲಿಸುತ್ತಿರುವ ಅಥವಾ ಸಮಗ್ರ ರಾಜ್ಯಕ್ಕೆ ಸೇವೆ ಸಲ್ಲಿಸುತ್ತಿರುವ ಒಂದು ಕಚೇರಿ ಅಥವಾ ಸಂಸ್ಥೆ ಅಥವಾ ಎಲ್ಲಾ ಮೇಲೆ ಹೇಳಿದ ಸಂಸ್ಥೆಗಳ ಉದ್ದೇಶಗಳನ್ನು ನೆರವೇರಿಸಲು ತರುವಾಯದ ದಿನಾಂಕದಲ್ಲಿ ಸೃಜಿಸಿರಬಹುದಾದ ಯಾವುದೇ ಇತರ ಹೊಸ ಕಚೇರಿ;

(ಜೆ) "ರಾಜ್ಯ ಸರ್ಕಾರ" ಎಂದರೆ, ಕರ್ನಾಟಕ ಸರ್ಕಾರ.

(ಕೆ) ಈ ಅಧಿಸೂಚನೆಯಲ್ಲಿ ಅಧಿನಿವಾಸಿ ಎಂದರೆ, ಕಂಡಿಕೆ–6ರಲ್ಲಿ ವ್ಯಾಖ್ಯಾನಿಸಲಾದಂತೆ **"ಸ್ಥಳೀಯ ವ್ಯಕ್ತಿಗಳು"**.

(2) ಸಾಮಾನ್ಯ ಖಂಡಗಳ ಅಧಿನಿಯಮ, 1897 (1897ರ ಕೇಂದ್ರ ಅಧಿನಿಯಮ, 10) ಕೇಂದ್ರ ಅಧಿನಿಯಮಗಳ ಅರ್ಥವಿವರಣೆಗೆ ಅನ್ವಯವಾಗುವ ಹಾಗೆಯೇ ಇದರ ಅರ್ಥ ವಿವರಣೆಗೂ ಅನ್ವಯವಾಗುತ್ತದೆ.

## ಅಧ್ಯಾಯ–I

**3. ಸ್ಥಳೀಯ ವೃಂದಗಳನ್ನು ವ್ಯವಸ್ಥೆಗೊಳಿಸುವುದು.–** (1) ರಾಜ್ಯಪಾಲರು, ಈ ಆದೇಶವು ಪ್ರಾರಂಭವಾದಾಗಿನಿಂದ ಮೂರು ತಿಂಗಳುಗಳ ಅವಧಿಯೊಳಗೆ, ರಾಜ್ಯ ಸರ್ಕಾರದ ಅಡಿಯಲ್ಲಿ ಹೈದ್ರಾಬಾದ್–ಕರ್ನಾಟಕ ಪ್ರದೇಶದಲ್ಲಿನ ಸಿವಿಲ್ ಸೇವೆಗಳಲ್ಲಿನ ಹುದ್ದೆಗಳು ಅಥವಾ ಸಿವಿಲ್ ಹುದ್ದೆಗಳನ್ನು ಅಥವಾ ರಾಜ್ಯ ಸರ್ಕಾರದ ನಿಯಂತ್ರಣದ ಅಡಿಯಲ್ಲಿ ಆ ಪ್ರದೇಶದಲ್ಲಿನ ಸ್ಥಳೀಯ ಪ್ರಾಧಿಕಾರ ಅಥವಾ ಸಂಸ್ಥೆ ಅಥವಾ ಸಂಘಟನೆಯಲ್ಲಿನ ಹುದ್ದೆಗಳನ್ನು ಈ ಮುಂದೆ ಉಪಬಂಧ ಕಲ್ಪಿಸಲಾದಂತೆ ಮತ್ತು ಆ ರೀತಿಯಲ್ಲಿ ಸ್ಥಳೀಯ ವೃಂದದ ವ್ಯಾಪ್ತಿಯೊಳಗೆ, ಅಧಿಸೂಚನೆಯ ಮೂಲಕ, ಗುರುತಿಸತಕ್ಕದ್ದು.

(2) ಆ ಪ್ರದೇಶದಲ್ಲಿ ರಾಜ್ಯ ಸಿವಿಲ್ ಸೇವೆಯಲ್ಲಿಯ ಪ್ರತಿಯೊಂದು ಇಲಾಖೆಯಲ್ಲಿಯ ಅಥವಾ ಸ್ಥಳೀಯ ಪ್ರಾಧಿಕಾರದ ಅಥವಾ ನಿಕಾಯ ಅಥವಾ ಸಂಸ್ಥೆಯಲ್ಲಿಯ ಸಮೂಹ–ಎ (ಕಿರಿಯ ಶ್ರೇಣಿ) ಮತ್ತು ಸಮೂಹ –ಬಿ ಹುದ್ದೆಗಳಿಗೆ ಸೇರಿದ ಹುದ್ದೆಗಳ ಶೇಕಡಾ ಎಪ್ಪತ್ತೈದರಷ್ಟು ಹುದ್ದೆಗಳನ್ನು ಸ್ಥಳೀಯ ವೃಂದಗಳೆಂದು ವ್ಯವಸ್ಥೆಗೊಳಿಸತಕ್ಕದ್ದು.

(3) ಆ ಪ್ರದೇಶದಲ್ಲಿ ರಾಜ್ಯ ಸಿವಿಲ್ ಸೇವೆಯ ಪ್ರತಿಯೊಂದು ಇಲಾಖೆಯಲ್ಲಿಯ ಅಥವಾ ಸ್ಥಳೀಯ ಪ್ರಾಧಿಕಾರ ಅಥವಾ ನಿಕಾಯ ಅಥವಾ ಸಂಸ್ಥೆಯಲ್ಲಿಯ ಸಮೂಹ–ಸಿ ಪ್ರವರ್ಗಕ್ಕೆ ಸೇರಿದ ಹುದ್ದೆಗಳ ಶೇಕಡಾ ಎಂಭತ್ತರಷ್ಟು ಹುದ್ದೆಗಳು ಮತ್ತು ಸಮೂಹ–ಡಿ ನಲ್ಲಿನ ಶೇಕಡಾ ಎಂಭತ್ತೈದರಷ್ಟು ಹುದ್ದೆಗಳನ್ನು ಸ್ಥಳೀಯ ವೃಂದಗಳೆಂದು ವ್ಯವಸ್ಥೆಗೊಳಿಸತಕ್ಕದ್ದು:

ಪರಂತು, ಸದರಿ ಮುಕ್ತಾಯದ ಅವಧಿಯಲ್ಲಿ ಏನೇ ಇದ್ದರೂ, ರಾಜ್ಯಪಾಲರು, ರಾಜ್ಯದ ಅಥವಾ ಯಾವುದೇ ಸ್ಥಳೀಯ ಪ್ರಾಧಿಕಾರ ಅಥವಾ ನಿಕಾಯ ಅಥವಾ ಸಂಸ್ಥೆಯ ಅಡಿಯಲ್ಲಿ ಬರುವ ಸಿವಿಲ್ ಸೇವೆಗಳಲ್ಲಿನ ಹುದ್ದೆಗಳ ಯಾವುದೇ ವರ್ಗಗಳನ್ನು ಹಾಗೆ ವ್ಯವಸ್ಥೆಗೊಳಿಸುವುದು ಯುಕ್ತವೆಂದು ಭಾವಿಸಿದಾಗಲೆಲ್ಲ, ರಾಜ್ಯ ಸರ್ಕಾರವನ್ನು ಆದೇಶದ ಮೂಲಕ ಅಗತ್ಯಪಡಿಸಬಹುದು.

**4. ವ್ಯಕ್ತಿಗಳ ಹಂಚಿಕೆ.–** (1) ಸ್ಥಳೀಯ ವೃಂದಗಳಿಗೆ ವ್ಯವಸ್ಥೆಗೊಳಿಸಲು ಅಗತ್ಯಪಡಿಸಲಾದ ಹುದ್ದೆಗಳನ್ನು ಹೊಂದಿರುವ ವ್ಯಕ್ತಿಗಳನ್ನು ಸರ್ಕಾರವು ಅಧಿಸೂಚಿಸಿದ ನಿಯಮಗಳನುಸಾರವಾಗಿ ಇಲ್ಲಿ ಇನ್ನು ಮುಂದೆ ನಿರ್ದಿಷ್ಟಪಡಿಸಲಾದ ತತ್ವಗಳು ಮತ್ತು ಪ್ರಕ್ರಿಯೆಗೆ ಅನುಸಾರವಾಗಿ ಈ ಬಗ್ಗೆ ರಾಜ್ಯ ಸರ್ಕಾರ ಅಥವಾ ಯಾವೊಬ್ಬ ಅಧಿಕಾರಿ ಅಥವಾ ಅದರ ಮೂಲಕ ಪ್ರಾಧಿಕೃತಗೊಳಿಸಿದ ಪ್ರಾಧಿಕಾರವು ಅಂಥ ವೃಂದಗಳಿಗೆ ಹಂಚಿಕೆ ಮಾಡತಕ್ಕದ್ದು.

(2) ಸ್ಥಳೀಯ ವ್ಯಕ್ತಿಗಳಿಗೆ ಸ್ಥಳೀಯ ವೃಂದಗಳಿಗೆ ಹಂಚಿಕೆಯಾಗಲು ಆಯ್ಕೆಯ ಅವಕಾಶವನ್ನು ನೀಡಬಹುದು ಮತ್ತು ಆ ಪ್ರದೇಶದಲ್ಲಿನ ಸ್ಥಳೀಯ ವೃಂದಗಳಿಗೆ ಹಂಚಿಕೆ ಮಾಡಬಹುದು.

(3) ಸ್ಥಳೀಯ ವೃಂದಕ್ಕೆ ಹಂಚಿಕೆ ಮಾಡುವ ಆದೇಶದಿಂದ ಬಾಧಿತನಾದ ಯಾವುದೇ ವ್ಯಕ್ತಿಯು, ಆದೇಶವು ತಲುಪಿದ ದಿನಾಂಕದಿಂದ ಅರವತ್ತು ದಿನಗಳ ಅವಧಿಯೊಳಗಾಗಿ ರಾಜ್ಯ ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಬಹುದು.

(4) ರಾಜ್ಯ ಸರ್ಕಾರವು, ಅಥವಾ ಸಕ್ಷಮ ಪ್ರಾಧಿಕಾರವು ಅಂಥ ಮನವಿಯನ್ನು ಸ್ವೀಕರಿಸಿದ ತರುವಾಯ, ಯುಕ್ತ ವಿಚಾರಣೆಯನ್ನು ನಡೆಸಿ ಅದನ್ನು ವಿಲೆ ಮಾಡತಕ್ಕದ್ದು:

ಪರಂತು, ಅಂಥ ಆದೇಶವು, ಹಂಚಿಕೆಯಾದ ಯಾವೊಬ್ಬ ಇತರ ವ್ಯಕ್ತಿಯನ್ನು ಬದಲಾಯಿಸುವ ಸಂದರ್ಭ ಒದಗಿ ಬಂದಾಗಲೆಲ್ಲ, ಆ ಇತರ ವ್ಯಕ್ತಿಗೆ ಮನವಿ ಸಲ್ಲಿಸಲು ಯುಕ್ತ ಅವಕಾಶವನ್ನು ನೀಡದೆ ಅಂಥ ಆದೇಶವನ್ನು ಹೊರಡಿಸತಕ್ಕದ್ದಲ್ಲ.

**5. ಸ್ಥಳೀಯ ವೃಂದಗಳು ಮತ್ತು ವ್ಯಕ್ತಿಗಳ ವರ್ಗಾವಣೆ.–** (1) ಹುದ್ದೆಗಳ ಯಾವುದೇ ಪ್ರವರ್ಗಕ್ಕೆ ಸಂಬಂಧಿಸಿದಂತೆ, ಯಾವ ಪ್ರದೇಶಕ್ಕೆ ಸ್ಥಳೀಯ ವೃಂದವನ್ನು ರೂಪಿಸಲಾಗಿದೆಯೋ ಆ ಪ್ರದೇಶವನ್ನು ನೌಕರಿ ಭರ್ತಿ, ನಿಯುಕ್ತಿ, ಜೇಷ್ಠತೆ ಬಡ್ತಿ ಮತ್ತು ವರ್ಗಾವಣೆ ಹಾಗೂ ಆ ಹುದ್ದೆಗಳ ಪ್ರವರ್ಗದ ಸಂಬಂಧದಲ್ಲಿ ರಾಜ್ಯ ಸರ್ಕಾರವು ನಿರ್ದಿಷ್ಟಪಡಿಸಬಹುದಾದಂಥ ಇತರ ವಿಷಯಗಳ ಉದ್ದೇಶಗಳಿಗಾಗಿ ಪ್ರತ್ಯೇಕ ಘಟಕವಾಗಿರತಕ್ಕದ್ದು.

(2) ಈ ಆದೇಶದಲ್ಲಿ ಏನೇ ಇದ್ದರು ಈ ಕೆಳಗಿನವುಗಳಿಗೆ ಉಪಬಂಧ ಮಾಡುವುದರಿಂದ ರಾಜ್ಯ ಸರ್ಕಾರವನ್ನು ನಿರ್ಬಂಧಿಸತಕ್ಕದ್ದು:–

(ಎ) ಈ ಆದೇಶವು ಅನ್ವಯವಾಗದಿರುವ ಇತರೆ ಯಾವುದೇ ಸ್ಥಳೀಯ ವೃಂದಕ್ಕೆ ಅಥವಾ ಯಾವುದೇ ಕಚೇರಿಗೆ ಅಥವಾ ಸಂಸ್ಥೆಗೆ ಯಾವುದೇ ಸ್ಥಳೀಯ ವೃಂದದಿಂದ ಅಥವಾ ವಿಪರ್ಯಯವಾಗಿ ವ್ಯಕ್ತಿಯನ್ನು ವರ್ಗಾಯಿಸುವುದು (ಅಥವಾ ನಿಯೋಜಿಸುವುದು).

(ಬಿ) ಅರ್ಹ ಅಥವಾ ಸೂಕ್ತ ವ್ಯಕ್ತಿಯು ನಂತರದ ವೃಂದದಲ್ಲಿ ಲಭ್ಯವಾಗದಿದ್ದಲ್ಲಿ, ಅಥವಾ ಅಂಥ ವರ್ಗಾವಣೆಯನ್ನು ಅನ್ಯಥಾ ಸಾರ್ವಜನಿಕ ಹಿತದೃಷ್ಟಿಯಿಂದ ಅಗತ್ಯವೆಂದು ಪರಿಗಣಿಸಿದಲ್ಲಿ ಒಬ್ಬ ವ್ಯಕ್ತಿಯನ್ನು ಒಂದು ಸ್ಥಳೀಯ ವೃಂದದಿಂದ ಮತ್ತೊಂದು ಸ್ಥಳೀಯ ವೃಂದಕ್ಕೆ ವರ್ಗಾಯಿಸುವುದು (ಅಥವಾ ನಿಯೋಜಿಸುವುದು).

(ಸಿ) ಸಾಮಾನ್ಯವಾಗಿ ರಾಜ್ಯವ್ಯಾಪಿ ವೃಂದವನ್ನು ಹೊಂದಿರುವ ಅಂಥ ವೃಂದಗಳಿಗಾಗಿ ರಾಜ್ಯದಲ್ಲಿ ಸಮಗ್ರ ಜಂಟಿ ಜ್ಯೇಷ್ಠತಾ ಪಟ್ಟಿ ತಯಾರಿಸುವುದು(ಪ್ರತ್ಯೇಕ ಸ್ಥಳೀಯ ವೃಂದ ಜ್ಯೇಷ್ಠತಾ ಪಟ್ಟಿಯೊಂದಿಗೆ);

(ಡಿ) ಗೆಜೆಟೆಡ್ ಹಂತಗಳಲ್ಲಿನ ಸ್ಥಳೀಯ ವೃಂದದ ಮೇಲೆ ತೆಗೆದುಕೊಂಡ ವ್ಯಕ್ತಿಗಳನ್ನು, ಕರ್ನಾಟಕದಲ್ಲಿ ಎಲ್ಲಿಯೇ ನಿಯೋಜಿಸಲು ತಾರತಮ್ಯ ಮಾಡಲಾಗಿಲ್ಲವೆಂದು ರಾಜ್ಯಪಾಲರು ಖಚಿತಪಡಿಸಿಕೊಳ್ಳುವುದು.

–ಉಪಬಂಧ ಮಾಡುವುದರಿಂದ ರಾಜ್ಯ ಸರ್ಕಾರವನ್ನು ಪ್ರತಿಬಂಧಿಸತಕ್ಕದ್ದಲ್ಲ.

**6. ಅಧಿನಿವಾಸಿ ( ಸ್ಥಳೀಯ ವ್ಯಕ್ತಿ) :–** (1) ಯಾವುದೇ ಹುದ್ದೆಗೆ ನೇರ ನೇಮಕ ಅಥವಾ ಮುಂಬಡ್ತಿಯ ಮಾಡುವ ಅಭ್ಯರ್ಥಿಯನ್ನು, ಸ್ಥಳೀಯ ಪ್ರದೇಶಕ್ಕೆ ಸಂಬಂಧಿಸಿದಂತೆ,–

(ಎ) 1.1.2013ಕ್ಕೆ ಮೊದಲು ಅವನು ಸ್ಥಳೀಯ ಪ್ರದೇಶದಲ್ಲಿ ಹುಟ್ಟಿದ್ದರೆ, ಅಥವಾ ಅವನ ತಂದೆತಾಯಿಗಳು ಆ ಪ್ರದೇಶದಲ್ಲಿ ಹುಟ್ಟಿದ್ದರೆ, ಅಥವಾ ಅವನ ತಂದೆ ತಾಯಿಗಳು ಸಾಮಾನ್ಯವಾಗಿ 1.1.2013ಕ್ಕೆ ಮೊದಲು ಹತ್ತು ವರ್ಷಗಳಿಗಿಂತ ಕಡಿಮೆಯಿರದ ಅವಧಿವರೆಗೆ ಸ್ಥಳೀಯ ಪ್ರದೇಶದಲ್ಲಿ ವಾಸವಾಗಿದ್ದರೆ, ಮತ್ತು ಅವರ ಹೆಸರು ಮತದಾರರ ಪಟ್ಟಿಯಲ್ಲಾಗಲಿ ಅಥವಾ ಪಡಿತರ ಚೀಟಿಯಲ್ಲಾಗಲಿ ಇದ್ದರೆ; ಅಥವಾ ಸ್ಥಳೀಯ ಪ್ರದೇಶದಲ್ಲಿ 1.1.2013 ರಂದು ಅಥವಾ ಮೊದಲು ಯಾವುದೇ ಸ್ಥಿರಾಸ್ತಿಯನ್ನು ಹೊಂದಿದ್ದರೆ; ಅಥವಾ

(ಬಿ) ಹುದ್ದೆಯ ನೇಮಕಾತಿಗೆ ಕನಿಷ್ಠ ವಿದ್ಯಾರ್ಹತೆಯನ್ನು ಗೊತ್ತುಪಡಿಸಿದ್ದ ಸಂದರ್ಭದಲ್ಲಿ,–

(i) ಅವನು, ಯಾವ ಶೈಕ್ಷಣಿಕ ವರ್ಷದಲ್ಲಿ ಸೇರಿದ್ದನೋ ಆ ವರ್ಷದ ಅಥವಾ ಸಂದರ್ಭಾನುಸಾರವಾಗಿ ಸಂಬಂಧಪಟ್ಟ ಅರ್ಹತಾ ಪರೀಕ್ಷೆಗೆ ಮೊದಲು ಸೇರಿದ ಕೊನೆಯ ಹತ್ತು ಕ್ರಮಾನುಗತ ಶೈಕ್ಷಣಿಕ ವರ್ಷಗಳಿಗೆ ಕಡಿಮೆಯಿರದ ಅವಧಿಯಲ್ಲಿ ಅಂಥ ಸ್ಥಳೀಯ ಪ್ರದೇಶದಲ್ಲಿರುವ ಶಿಕ್ಷಣ ಸಂಸ್ಥೆ ಅಥವಾ ಶಿಕ್ಷಣ ಸಂಸ್ಥೆಗಳಲ್ಲಿ ವಿದ್ಯಾಭ್ಯಾಸ ಮಾಡಿದ್ದರೆ; ಅಥವಾ

(ii) ಅವನು ಯಾವ ಶೈಕ್ಷಣಿಕ ವರ್ಷದಲ್ಲಿ ಸೇರಿದ್ದನೋ ಆ ವರ್ಷದ ಅಥವಾ ಸಂದರ್ಭಾನುಸಾರ ಸಂಬಂಧಪಟ್ಟ ಅರ್ಹತಾ ಪರೀಕ್ಷೆಗೆ ಮೊದಲು ಸೇರಿದ, ಕೊನೆಯ ಹತ್ತು ಕ್ರಮಾನುಗತ ಶೈಕ್ಷಣಿಕ ವರ್ಷಗಳ ಇಡೀ ಅವಧಿಯಲ್ಲಿ ಅಥವಾ ಅದರ ಯಾವುದೇ ಭಾಗದಲ್ಲಿ, ಅವನು ಯಾವುದೇ ಶಿಕ್ಷಣ ಸಂಸ್ಥೆಯಲ್ಲಿ ಅಭ್ಯಾಸ ಮಾಡದಿದ್ದರೆ, ಯಾವ ಅರ್ಹತಾ ಪರೀಕ್ಷೆಯಲ್ಲಿ ಅವನು ಹಾಜರಾಗಿದ್ದಾನೋ ಅಥವಾ ಸಂದರ್ಭಾನುಸಾರ ಮೊದಲು ಸೇರಿರುವನೋ ಅದರ ಪ್ರಾರಂಭದ ದಿನಾಂಕದ ನಿಕಟ ಪೂರ್ವದ ಹತ್ತು ವರ್ಷಕ್ಕಿಂತ ಕಡಿಮೆಯಿರದ ಅವಧಿಯಲ್ಲಿ ಆ ಸ್ಥಳೀಯ ಪ್ರದೇಶದಲ್ಲಿ ಅವನು ವಾಸವಾಗಿದ್ದರೆ; ಅಥವಾ

(iii) ಅವನ ತಂದೆ–ತಾಯಿ ಕ್ರಮಾನುಗತ ಹತ್ತು ಶೈಕ್ಷಣಿಕ ವರ್ಷಗಳ ಅವಧಿಯಲ್ಲಿ ಅಂಥ ಸ್ಥಳೀಯ ಪ್ರದೇಶದಲ್ಲಿ ಅಧ್ಯಯನ ಮಾಡಿದ್ದರೆ,

(ಸಿ) ಹುದ್ದೆಯ ನೇಮಕಾತಿಗೆ, ಕನಿಷ್ಠ ಶೈಕ್ಷಣಿಕ ವಿದ್ಯಾರ್ಹತೆಯನ್ನು ಗೊತ್ತುಪಡಿಸಿದ್ದ ಸಂದರ್ಭದಲ್ಲಿ ಅವನಾಗಲಿ ಅಥವಾ ಆತನ ತಂದೆ–ತಾಯಿಯಾಗಲಿ, ನೇಮಕಾತಿಗಾಗಿ ಯಾವ ದಿನಾಂಕದಂದು ಹುದ್ದೆಯನ್ನು ಅಧಿಸೂಚಿಸಲಾಗಿದೆಯೋ ಆ ದಿನಾಂಕದ ನಿಕಟ ಪೂರ್ವದ ಹತ್ತು ಕ್ರಮಾನುಗತಿ ವರ್ಷಗಳಿಗೆ ಕಡಿಮೆಯಿರದ ಅವಧಿಯಲ್ಲಿ ಆ ಸ್ಥಳೀಯ ಪ್ರದೇಶದಲ್ಲಿ ವಾಸವಾಗಿದ್ದರೆ; ಮತ್ತು

(ಡಿ) ಮಹಿಳೆಯ ಸಂದರ್ಭದಲ್ಲಿ, ಮೇಲೆ (ಎ) ಯಿಂದ (ಸಿ) ಖಂಡಗಳವರೆಗೆ ನಿರ್ದಿಷ್ಟಪಡಿಸಿದ

ಒಬ್ಬ ಸ್ಥಳೀಯ ವ್ಯಕ್ತಿಯನ್ನು ಆಕೆಯು ವಿವಾಹವಾಗಿದ್ದಲ್ಲಿ,

(ಇ) ಈ ನಿಯಮಗಳು ಅನ್ವಯಿಸುವ ಈಗಿರುವ ನೌಕರರಿಗಾಗಿ, ಸ್ಥಳೀಯ ಪ್ರದೇಶದೊಳಗೆ ಬರುವ ಅವರ ಸ್ವಂತ ಊರು ಅಥವಾ ಸ್ಥಳಕ್ಕೆ ಸಂಬಂಧಿಸಿದಂತೆ, ಅವರ ಸೇವಾಪುಸ್ತಕದಲ್ಲಿ 1.1.2013ಕ್ಕೆ ಮುಂಚಿನ ನಮೂದು ಅವರ ಅಧಿವಾಸಿದ ನಿರ್ಣಾಯಕ ಸಾಕ್ಷ್ಯವಾಗಿರತಕ್ಕದ್ದು.

–ಸ್ಥಳೀಯ ವ್ಯಕ್ತಿಯೆಂದು ಭಾವಿಸತಕ್ಕದ್ದು.

**ವಿವರಣೆ:** ಈ ಕಂಡಿಕೆಯ ಉದ್ದೇಶಕ್ಕಾಗಿ,–

(i) "ಶಿಕ್ಷಣ ಸಂಸ್ಥೆ" ಎಂದರೆ, ರಾಜ್ಯ ಸರ್ಕಾರ ವಿಶ್ವವಿದ್ಯಾಲಯ ಅಥವಾ ಇತರ ಸಕ್ಷಮ ಪ್ರಾಧಿಕಾರವು ಮಾನ್ಯ ಮಾಡಿದ ವಿಶ್ವವಿದ್ಯಾಲಯ ಅಥವಾ ಯಾವುದೇ ಶೈಕ್ಷಣಿಕ ಸಂಸ್ಥೆ;

(ii) "ಹುದ್ದೆಗೆ ಸಂಬಂಧಿಸಿದಂತೆ ಸಂಬಂಧಪಟ್ಟ ಅರ್ಹತಾ ಪರೀಕ್ಷೆ" ಎಂದರೆ,–

(ಎ) ಹುದ್ದೆಗೆ ಗೊತ್ತುಪಡಿಸಿದ ಕನಿಷ್ಠ ಹುದ್ದೆಗೆ ಗೊತ್ತುಪಡಿಸಿದ ಕನಿಷ್ಠ ಶೈಕ್ಷಣಿಕ ವಿದ್ಯಾರ್ಹತೆಯಲ್ಲಿ ಉತ್ತೀರ್ಣರಾದ ಪರೀಕ್ಷೆ;

(ಬಿ) ಎಸ್‌ಎಸ್‌ಎಲ್‌ಸಿ ಪರೀಕ್ಷೆ ಅಥವಾ ಎಸ್‌ಎಸ್‌ಎಲ್‌ಸಿಗೆ ಸಮವೆಂದು ರಾಜ್ಯ ಸರ್ಕಾರವು ಘೋಷಿಸಿದ ಪರೀಕ್ಷೆ – ಇವೆರಡರಲ್ಲಿ ಯಾವುದೂ ಕಡಿಮೆಯೋ ಅದು; ಮತ್ತು

(iii) ಅಭ್ಯರ್ಥಿಯು ಅಧ್ಯಯನ ಮಾಡಿರುವ ಕ್ರಮಾನುಗತ ಶೈಕ್ಷಣಿಕ ವರ್ಷಗಳನ್ನು ಪರಿಗಣಿಸಿ ಯಾವುದೇ ಪರೀಕ್ಷೆಯಲ್ಲಿ ಉತ್ತೀರ್ಣನಾಗಲು ಆತನ ವಿಫಲನಾಗಿರುವ ಕಾರಣಗಳಿಗಾಗಿ ಆತನ ಅಧ್ಯಯಾನಕ್ಕೆ ಅಡಚಣೆಯಾದ ಯಾವುದೇ ಅವಧಿಯನ್ನು ಪರಿಗಣಿಸತಕ್ಕದ್ದಲ್ಲ;

(iv) ಯಾವುದೇ ಹುದ್ದೆಗೆ ನೇಮಕಾತಿ ಮಾಡಲು ಯಾವೊಬ್ಬ ಅಭ್ಯರ್ಥಿ ಅಥವಾ ಆತನ ತಂದೆ–ತಾಯಿ ಯಾವುದೇ ಸ್ಥಳೀಯ ಪ್ರದೇಶದಲ್ಲಿ ವಾಸಿಸುತ್ತಿರುವರೇ ಎಂಬ ಪ್ರಶ್ನೆಯನ್ನು, ಅಭ್ಯರ್ಥಿಯು ವಾಸ್ತವವಾಗಿ ವಾಸಿಸುತ್ತಿದ್ದ ಸ್ಥಳಕ್ಕೆ ಸಂಬಂಧಪಟ್ಟಂತೆ ಮಾತ್ರ ನಿರ್ಧರಿಸತಕ್ಕದ್ದಲ್ಲ ಆದರೆ ಆತನ ತಂದೆ–ತಾಯಿಗಳ ನಿವಾಸಕ್ಕೆ ಸಂಬಂಧಿಸಿದಂತೆಯೂ ನಿರ್ಧರಿಸತಕ್ಕದ್ದು.

**7. ಪ್ರಮಾಣಪತ್ರವನ್ನು ನೀಡಲು ಸಕ್ಷಮ ಪ್ರಾಧಿಕಾರ.**– (1) ಸರ್ಕಾರವು, ಒಬ್ಬ ಸ್ಥಳೀಯ ವ್ಯಕ್ತಿಗೆ ಅರ್ಹತಾ ಪ್ರಮಾಣಪತ್ರವನ್ನು ನೀಡಲು ಸಕ್ಷಮ ಪ್ರಾಧಿಕಾರವನ್ನು ಅಧಿಸೂಚಿಸಬಹುದು. ಸಕ್ಷಮ ಪ್ರಾಧಿಕಾರವು, ನಿಯಮಿಸಬಹುದಾದ ಅಂಥ ವಿಧಾನದಲ್ಲಿ ಯುಕ್ತ ವಿಚಾರಣೆ ನಡೆಸಿ ಸಾರ್ವಜನಿಕ ಗಮನಕ್ಕೆ ತರುವಾಯ ಅರ್ಹತಾ ಪ್ರಮಾಣ ಪತ್ರವನ್ನು ನೀಡಬಹುದು.

(2) ಸಕ್ಷಮ ಪ್ರಾಧಿಕಾರದ ಆದೇಶದಿಂದ ಬಾಧಿತನಾದ ಯಾವೊಬ್ಬ ವ್ಯಕ್ತಿಯು (ಅರ್ಜಿದಾರ ಅಥವಾ ಸಾರ್ವಜನಿಕ ಸದಸ್ಯ), ಅಂಥ ಅರ್ಹತಾ ಪ್ರಮಾಣಪತ್ರವನ್ನು ಹೊರಡಿಸಿದ ಮೂವತ್ತು ದಿನಗಳೊಳಗೆ, ಡೆಪ್ಯೂಟಿ ಕಮೀಷನರು ಅಥವಾ ಸರ್ಕಾರವು ಅಧಿಸೂಚಿಸಿದ ಯಾವುದೇ ಇತರ ಸಕ್ಷಮ ಪ್ರಾಧಿಕಾರಕ್ಕೆ ಮೇಲ್ಮನವಿ ಸಲ್ಲಿಸಬಹುದು.

(3) ಸಕ್ಷಮ ಪ್ರಾಧಿಕಾರ ಮತ್ತು ಅಪೀಲು ಪ್ರಾಧಿಕಾರವು ಅರ್ಜಿ ಅಥವಾ ಅಪೀಲನ್ನು ಅದನ್ನು ಸ್ವೀಕರಿಸಿದ ದಿನಾಂಕದಿಂದ ಮೂವತ್ತು ದಿನಗಳೊಳಗಾಗಿ ವಿಲೆ ಮಾಡತಕ್ಕದ್ದು.

(4) ಅಧಿವಾಸವನ್ನು ರುಜುವಾತುಪಡಿಸಲು ಅಗತ್ಯವಾದ 'ಜನನ ಪ್ರಮಾಣಪತ್ರ'ವನ್ನು ಸರ್ಕಾರವು ನಿಯಮಿಸಲಾದ ನಮೂನೆಯಲ್ಲಿ ಹೊರಡಿಸತಕ್ಕದ್ದು.

(5) ಅಧಿವಾಸದ ರುಜುವಾತಿಗಾಗಿ ಸಿಂಧುತ್ವ ಪ್ರಮಾಣಪತ್ರವನ್ನು ಹೊರಡಿಸುವುದಕ್ಕಾಗಿ ಕಾರ್ಯವಿಧಾನವನ್ನು ಸರ್ಕಾರವು ಮಾಡಬಹುದು.

**8. ನೇರ ನೇಮಕಾತಿ ಅಥವಾ ಬಡ್ತಿಯ ವಿಷಯದಲ್ಲಿ ಮೀಸಲಾತಿ.**– (1) ಸಮೂಹ ಎ (ಕಿರಿಯ ಶ್ರೇಣಿ), ಸಮೂಹ ಬಿ, ಸಮೂಹ ಸಿ ಮತ್ತು ಸಮೂಹ ಡಿ ವರೆಗಿನ ಹುದ್ದೆಗಳನ್ನು ಒಳಗೊಂಡಿರುವ ಆ ಪ್ರದೇಶದ ಯಾವುದೇ ಸ್ಥಳೀಯ ಪ್ರಾಧಿಕಾರ ಅಥವಾ ಯಾವುದೇ ನಿಕಾಯ ಅಥವಾ ಸಂಸ್ಥೆಯಲ್ಲಿ ರಾಜ್ಯ ಸರ್ಕಾರದ ಅಡಿಯಲ್ಲಿ ಯಾವುದೇ ಸಮಯದಲ್ಲಿ ನೇರ ನೇಮಕಾತಿ ಅಥವಾ ಬಡ್ತಿ ಮೂಲಕ ಅಥವಾ ಭರ್ತಿ ಮಾಡಬೇಕಾದ ಯಾವುದೇ ಸ್ಥಳೀಯ ವೃಂದದ ಎಲ್ಲಾ ಹುದ್ದೆಗಳನ್ನು 3ನೇ ಕಂಡಿಕೆಯಲ್ಲಿ ನಿರ್ದಿಷ್ಟಪಡಿಸಬಹುದಾದಷ್ಟು ಮಟ್ಟಿಗೆ ಅಂಥ ವೃಂದಕ್ಕೆ ಸಂಬಂಧಿಸಿದ ಸ್ಥಳೀಯ ಪ್ರದೇಶ ಅಥವಾ ವಲಯಕ್ಕೆ ಸಂಬಂಧಿಸಿದಂತೆ ಸ್ಥಳೀಯ ವ್ಯಕ್ತಿಗಳ ಪರವಾಗಿ ಮೀಸಲಿರಿಸತಕ್ಕದ್ದು.

(2) ಸಿ ಮತ್ತು ಡಿ ಸಮೂಹದ ಹುದ್ದೆಗಳ ವೃಂದ ಮತ್ತು ನೇಮಕಾತಿಯನ್ನು ಜಿಲ್ಲಾವಾರು ವೃಂದವೆಂದು ವ್ಯವಸ್ಥೆಗೊಳಿಸತಕ್ಕದ್ದು.

(3) ಈ ಕಂಡಿಕೆಯ ಅಡಿಯಲ್ಲಿ ಸ್ಥಳೀಯ ವ್ಯಕ್ತಿಗಳ ಪರವಾಗಿ ಮೀಸಲಿರಿಸಬೇಕಾದ ಹುದ್ದೆಗಳ ಸಂಖ್ಯೆಯನ್ನು ನಿರ್ಧರಿಸುವಾಗ, ಹುದ್ದೆಯ ಯಾವುದೇ ಅಪೂರ್ಣಾಂಕವನ್ನು ಒಂದು ಎಂದು ಲೆಕ್ಕ ಹಾಕತಕ್ಕದ್ದು.

(4) ಈ ಕಂಡಿಕೆಯಲ್ಲಿ ಹಿಂದೆ ಹೇಳಲಾದ ಉಪಬಂಧಗಳಲ್ಲಿ ಏನೇ ಒಳಗೊಂಡಿದ್ದರೂ,–

(ಎ) ಯಾವುದೇ ಸ್ಥಳೀಯ ವೃಂದಕ್ಕೆ ಯಾವುದೇ ಸಮಯದಲ್ಲಿ ನೇರ ನೇಮಕಾತಿ ಮೂಲಕ ತುಂಬಲಾದ ಹುದ್ದೆಗಳ ಪೈಕಿ ಕನಿಷ್ಠ ಪಕ್ಷ ಒಂದು ಹುದ್ದೆಯನ್ನು ಮೀಸಲಿರಿಸದೇ ಉಳಿಸತಕ್ಕದ್ದು;

(ಬಿ) ಸಾಧ್ಯವಾದಷ್ಟು ಮಟ್ಟಿಗೆ, ಕನಿಷ್ಠ ಪಕ್ಷ ಒಂದು ಹುದ್ದೆಯನ್ನು, ಪ್ರತಿಯೊಂದು ಸ್ಥಳೀಯ ಪ್ರದೇಶಕ್ಕೆ ಸಂಬಂಧಿಸಿದ ಸ್ಥಳೀಯ ಅಭ್ಯರ್ಥಿಗಳಿಗೆ ಮೀಸಲಿರಿಸತಕ್ಕದ್ದು.

(5) ಯಾವುದೇ ಸಮಯದಲ್ಲಿ ಯಾವುದೇ ಹುದ್ದೆಗಾಗಿ ಲಭ್ಯ ಸ್ಥಳೀಯ ಅಭ್ಯರ್ಥಿಗಳು ಲಭ್ಯವಾಗದಿದ್ದಲ್ಲಿ, ಅಂಥ ಖಾಲಿ ಹುದ್ದೆಗಳನ್ನು ಬ್ಯಾಕ್ ಲಾಗ್ ಎಂದು ತೆಗೆದುಕೊಳ್ಳತಕ್ಕದ್ದು ಮತ್ತು ಮುಂದಿನ ನೇಮಕಾತಿಯ ವರೆಗೆ ಅದನ್ನು ಮುಂದುವರೆಸತಕ್ಕದ್ದು ಮತ್ತು ನಂತರ ಅದನ್ನು ಮೀಸಲಾತಿಯಲ್ಲವೆಂದು ಭಾವಿಸಬಹುದು ಮತ್ತು ಅದಕ್ಕಾನುಸಾರವಾಗಿ ಭರ್ತಿ ಮಾಡತಕ್ಕದ್ದು.

**9. ನಿರ್ದೇಶನವನ್ನು ನೀಡಲು ಪ್ರಾಧಿಕೃತಗೊಳಿಸಲು ಅಧಿಕಾರ.**– (1) ರಾಜ್ಯಪಾಲರು, ಆದೇಶದ ಮೂಲಕ, ಈ ಆದೇಶವನ್ನು ಜಾರಿಗೊಳಿಸುವ ಉದ್ದೇಶಕ್ಕಾಗಿ ಅಗತ್ಯವೆನಿಸಬಹುದಾದ ಅಥವಾ ಯುಕ್ತವೆನಿಸಬಹುದಾದ ಅಂಥ ನಿರ್ದೇಶನವನ್ನು ಯಾವುದೇ ಸ್ಥಳೀಯ ಪ್ರಾಧಿಕಾರ ಅಥವಾ ನಿಕಾಯ ಅಥವಾ ಸಂಸ್ಥೆಗಳಿಗೆ ನೀಡಲು ರಾಜ್ಯ ಸರ್ಕಾರವನ್ನು ಅಗತ್ಯಪಡಿಸಬಹುದು ಮತ್ತು ಅಂಥ ಸ್ಥಳೀಯ ಪ್ರಾಧಿಕಾರ, ನಿಕಾಯ ಅಥವಾ ಸಂಸ್ಥೆಯ ಅಂಥ ನಿರ್ದೇಶನಗಳನ್ನು ಪಾಲಿಸತಕ್ಕದ್ದು.

(2) ಸರ್ಕಾರವು, (1)ನೇ ಉಪಕಂಡಿಕೆಯ ಅಡಿಯಲ್ಲಿ ಯಾವುದೇ ನಿರ್ದೇಶನವನ್ನು ಹೊರಡಿಸುವ ಉದ್ದೇಶಕ್ಕಾಗಿ, ಅಥವಾ ಉಪಕಂಡಿಕೆಯ ಅಡಿಯಲ್ಲಿ ಹೊರಡಿಸಲಾದ ಯಾವುದೇ ನಿರ್ದೇಶನಗಳನ್ನು ಪಾಲಿಸಲಾಗಿದೆಯೆಂಬುದನ್ನು ತಾನು ಮನದಟ್ಟು ಮಾಡಿಕೊಳ್ಳಲು, ಆದೇಶದಲ್ಲಿ ನಿರ್ದಿಷ್ಟಪಡಿಸಬಹುದಾದ ಅಂಥ ಮಾಹಿತಿ ಅಥವಾ ವಿವರಗಳ ವರದಿಯನ್ನು ತಮಗೆ ನೀಡಲು ಯಾವುದೇ ಸ್ಥಳೀಯ ಪ್ರಾಧಿಕಾರ ಅಥವಾ ನಿಕಾಯ ಅಥವಾ ಸಂಸ್ಥೆಯನ್ನು ಲಿಖಿತ ಆದೇಶದ ಮೂಲಕ ಅಗತ್ಯಪಡಿಸಬಹುದು ಮತ್ತು ಅಂಥ ಸ್ಥಳೀಯ ಪ್ರಾಧಿಕಾರವು ಅಂಥ ಆದೇಶವನ್ನು ಪಾಲಿಸತಕ್ಕದ್ದು.

**10. ಆದೇಶವು ಅಧ್ಯಾರೋಹಿ ಪರಿಣಾಮ ಹೊಂದುವುದು.**– **(1)** ಈ ಆದೇಶದ ಉಪಬಂಧಗಳು ರಾಜ್ಯ ಸರ್ಕಾರ ಅಥವಾ ಯಾವುದೇ ಸ್ಥಳೀಯ ಪ್ರಾಧಿಕಾರ ಅಥವಾ ನಿಕಾರ ಅಥವಾ ಸಂಸ್ಥೆಯ ಅಡಿಯಲ್ಲಿಯ ಹುದ್ದೆಗಳಿಗೆ ನೇರ ನೇಮಕಾತಿ ಮಾಡುವ ಅಥವಾ ಬಡ್ತಿ ನೀಡುವ ಸಂಬಂಧದಲ್ಲಿ ಈ

ಆದೇಶವು ಪ್ರಾರಂಭವಾಗುವುದಕ್ಕೆ ಮೊದಲು ಅಥವಾ ನಂತರ ಅದರ ಅಡಿಯಲ್ಲಿ ಮಾಡಲಾದ ಯಾವುದೇ ಅಧಿನಿಯಮ ಅಥವಾ ನಿಯಮ, ವಿನಿಯಮ ಅಥವಾ ಉಪವಿಧಿಯಲ್ಲಿ ಏನೇ ಒಳಗೊಂಡಿದ್ದರೂ, ಅಧ್ಯಾರೋಹಿ ಪರಿಣಾಮ ಹೊಂದಿರತಕ್ಕದ್ದು.

(2) ಈ ಆದೇಶಗಳ ಅಡಿಯಲ್ಲಿ ಮಾಡಲಾದ ನೇರ ನೇಮಕಾತಿ ಮತ್ತು ಬಡ್ತಿಗಳಿಗಾಗಿ ಆರ್ಥಿಕ ಇಲಾಖೆಯ ಸಹಮತ ಇದೆಯೆಂದು ಪೂರ್ವಭಾವನೆ ಮಾಡತಕ್ಕದ್ದು.

(3) ಮೀಸಲಾತಿ ಹುದ್ದೆಗಳಿಗಾಗಿ ಯಾವುದೇ ಮಿತವ್ಯಯ ಕ್ರಮವನ್ನು ಅನ್ವಯಿಸತಕ್ಕದ್ದಲ್ಲ ಮತ್ತು ಮೀಸಲು ಹುದ್ದೆಯನ್ನು ಸಾಧ್ಯವಾದಷ್ಟು ಕ್ರಮಬದ್ಧ ನೇಮಕಾತಿಯ ಮೂಲಕ ಭರ್ತಿ ಮಾಡತಕ್ಕದ್ದು ಮತ್ತು ಹೊರಗಿನ ಮೂಲದಿಂದಲ್ಲ.

(4) ಕಡೇ ಪಕ್ಷ ಮೇಲೆ ಕಂಡಿಕೆ 3ರಲ್ಲಿ ನಿಗದಿಪಡಿಸಲಾದ ಮೀಸಲಾತಿಯ ವ್ಯಾಪ್ತಿಗೆ ಆ ಪ್ರದೇಶದಲ್ಲಿ ಮಾಡಲಾದ ಯಾವುದೇ ತಾತ್ಕಾಲಿಕ ಅಥವಾ ಗುತ್ತಿಗೆ ನೇಮಕಾತಿಗಳು ಸ್ಥಳೀಯ ವ್ಯಕ್ತಿಯದ್ದಾಗಿರತಕ್ಕದ್ದು.

(5) ಕಡೇ ಪಕ್ಷ ಮೇಲೆ ಕಂಡಿಕೆ 3ರಲ್ಲಿ ನಿಗದಿಪಡಿಸಲಾದ ಮೀಸಲಾತಿಯ ವ್ಯಾಪ್ತಿಗೆ ಹೊರಗುತ್ತಿಗೆ ಮೂಲಕ ಆ ಪ್ರದೇಶದಲ್ಲಿ ಮಾನವ ಶಕ್ತಿಯ ಯಾವುದೇ ಒದಗಿಸುವಿಕೆಯು ಸ್ಥಳೀಯ ವ್ಯಕ್ತಿಯದ್ದಾಗಿರತಕ್ಕದ್ದು.

**11. ಸಂದೇಹಗಳ ನಿವಾರಣೆ.**– ಸಂದೇಹಗಳನ್ನು ನಿವಾರಿಸಲು, ಈ ಆದೇಶದಲ್ಲಿರುವುದಾವುದೂ, ನಾಗರಿಕರ ಹಿಂದುಳಿದ ವರ್ಗಗಳಿಗೆ ಸೇರಿದ ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡಗಳಿಗೆ ಸೇರಿದ ವ್ಯಕ್ತಿಗಳ ಪರವಾಗಿ ಅಥವಾ ಅಂಗವಿಕಲರ, ಮಹಿಳೆ, ಮಾಜಿ ಸೈನಿಕ, ಗ್ರಾಮೀಣ ಅಭ್ಯರ್ಥಿಗಳು ಅಂಥ ಉಪಬಂಧಗಳು ಈ ಆದೇಶಕ್ಕೆ ಅಸಂಗತವಾಗದಿರುವಷ್ಟರ ಮಟ್ಟಿಗೆ ಯೋಜನೆಯಿಂದ ಸ್ಥಾನ ಪಲ್ಲಟವಾದ ವ್ಯಕ್ತಿಗಳ ಪರವಾಗಿ ಹುದ್ದೆಗಳಿಗೆ ನೇಮಕ ಮಾಡುವ ವಿಷಯದಲ್ಲಿನ ಮೀಸಲಾತಿಗೆ ಸಂಬಂಧಿಸಿದಂತೆ ಈ ಆದೇಶವು ಪ್ರಾರಂಭವಾಗುವ ಮೊದಲು ಅಥವಾ ನಂತರ ಯಾವುದೇ ಕಾನೂನಿನ ಮೂಲಕ ಅಥವಾ ಅದರಡಿಯಲ್ಲಿ ರಾಜ್ಯ ಸರ್ಕಾರ ಅಥವಾ ಇತರ ಸಕ್ಷಮ ಪ್ರಾಧಿಕಾರವು ಮಾಡಿದ ಯಾವುದೇ ಉಪಬಂಧಗಳ ಕಾರ್ಯಾಚರಣೆಗೆ ಬಾಧಕವಾಗತಕ್ಕದ್ದಲ್ಲವೆಂದು ಈ ಮೂಲಕ ಘೋಷಿಸಲಾಗಿದೆ.

**12. ಕೆಲವು ನೇಮಕಾತಿಗಳು ಮತ್ತು ಬಡ್ತಿಗಳು ತಾತ್ಕಾಲಿಕವಾಗಿರುವುದು.**– ದಿನಾಂಕ 1–1–2013 ರಂದು ಮಾಡಲಾದ ಸಂವಿಧಾನದ 371ಜೆ ತಿದ್ದುಪಡಿಯ ನಂತರ ಮತ್ತು ಈ ಆದೇಶ ಉಪಬಂಧಗಳ ಅಡಿಯಲ್ಲಿ ಯಾವುದೇ ಸ್ಥಳೀಯ ವೃಂದಗಳನ್ನು ವ್ಯವಸ್ಥೆಗೊಳಿಸುವ ಮೊದಲು ಅಥವಾ 3ನೇ ಕಂಡಿಕೆಯ ಉಪಬಂಧಕ್ಕೆ ಅನುಸಾರವಾಗಿ ಮಾಡಲಾದ ಯಾವುದೇ ಆದೇಶದ ಪ್ರಾರಂಭದ ನಂತರ ಮಾಡಲಾದ ಯಾವುದೇ ನೇಮಕಾತಿ ಅಥವಾ ಬಡ್ತಿ, ಮತ್ತು ಈ ಆದೇಶ ಅಥವಾ 3ನೇ ಕಂಡಿಕೆಯ ಉಪಬಂಧಕ್ಕನುಸಾರವಾಗಿ ಮಾಡಲಾದ ಯಾವುದೇ ಆದೇಶದ ಅಡಿಯಲ್ಲಿ ಯಾವುದೇ ಸ್ಥಳೀಯ ವೃಂದವನ್ನು ರೂಪಿಸುವ ಮೊದಲು ಅಂಥ ವೃಂದಕ್ಕೆ ಸೇರಿಸಬೇಕಾಗಿರುವ ಯಾವುದೇ ಹುದ್ದೆಯು ತಾತ್ಕಾಲಿಕವಾಗಿರತಕ್ಕದ್ದು ಮತ್ತು ಅಂಥ ವ್ಯವಸ್ಥೆಯ ನಂತರ ಆರು ತಿಂಗಳ ಅವಧಿಯೊಳಗೆ, ಈ ಆದೇಶದ ಉಪಬಂಧಗಳಿಗನುಸಾರವಾಗಿ ಪರಿಶೀಲಿಸತಕ್ಕದ್ದು ಮತ್ತು ಮರು ಹೊಂದಾಣಿಕೆ ಮಾಡತಕ್ಕದ್ದು.

**ವಿವರಣೆ:** ಈ ಕಂಡಿಕೆಯ ಉದ್ದೇಶಕ್ಕಾಗಿ, ಯಾವುದೇ ಸ್ಥಳೀಯ ವೃಂದವನ್ನು 4ನೇ ಕಂಡಿಕೆಯ ಅಡಿಯಲ್ಲಿ ಅದಕ್ಕೆ ವ್ಯಕ್ತಿಗಳ ಹಂಚಿಕೆಯೊಂದಿಗೆ ವ್ಯವಸ್ಥೆ ಮಾಡಲಾಗಿದೆಯೆಂದು ಭಾವಿಸತಕ್ಕದ್ದು.

**12ಎ. ವಿವಾದದ ತೀರ್ಮಾನಕ್ಕಾಗಿ ಸ್ಥಳೀಯ ನ್ಯಾಯಾಧಿಕರಣ ಪೀಠ :**– ರಾಜ್ಯಪಾಲರು, ಈ ಆದೇಶದಿಂದಾಗಿ ಉದ್ಭವಿಸುವ ವಿವಾದಗಳನ್ನು ಇತ್ಯರ್ಥಗೊಳಿಸಲು, ಒಂದು ಅಥವಾ ಹೆಚ್ಚಿನ ಆಡಳಿತ ನ್ಯಾಯಾಧಿಕರಣದ ಸ್ಥಳೀಯ ಬೆಂಚುಗಳನ್ನು ಸ್ಥಾಪಿಸುವಂತೆ ಸಮುಚಿತ ಪ್ರಾಧಿಕಾರವನ್ನು ಕೋರತಕ್ಕದ್ದು, ಅಂಥ ನ್ಯಾಯಾಲಯದ ಆದೇಶವು ಅಂತಿಮವಾಗಿರತಕ್ಕದ್ದು.

## ಅಧ್ಯಾಯ–II

**13. ರಾಜ್ಯ ಮಟ್ಟದ ಕಚೇರಿಗಳು ಅಥವಾ ಸಂಸ್ಥೆಗಳು ಅಥವಾ ಅಪೆಕ್ಸ್ ಸಂಸ್ಥೆಗಳು.**– ಕರ್ನಾಟಕ ಒಟ್ಟು ಜನಸಂಖ್ಯೆಯಲ್ಲಿ ಆ ಪ್ರದೇಶದ ಶೇಕಡಾವಾರು ಜನಸಂಖ್ಯೆಯನ್ನು ಪ್ರತಿಫಲಿಸುವ ಈ ಮುಂದಿನ ರಾಜ್ಯ ಮಟ್ಟದ ಕಚೇರಿಗಳು ಅಥವಾ ರಾಜ್ಯ ಮಟ್ಟದ ಸಂಸ್ಥೆಗಳು ಅಥವಾ ಅಪೆಕ್ಸ್ ಸಂಸ್ಥೆಗಳಲ್ಲಿನ ಎಲ್ಲಾ ಇಲಾಖೆಗಳು, ನಿಕಾಯ ಅಥವಾ ಸಂಘಟನೆಯಲ್ಲಿನ ಶೇಕಡಾ ಎಂಟು ಹುದ್ದೆಗಳನ್ನು ಮತ್ತು ಗ್ರೂಪ್ ಎ (ಕಿರಿಯ ಶ್ರೇಣಿ) ಮಟ್ಟಗಳ ವರೆಗಿನ ಹುದ್ದೆಗಳನ್ನು ಆ ಪ್ರದೇಶದ ಸ್ಥಳೀಯ ವ್ಯಕ್ತಿಗಳಿಗಾಗಿ ಮೀಸಲಿಡತಕ್ಕದ್ದು, ಎಂದರೆ:–

(ಎ) ರಾಜ್ಯ ಸರ್ಕಾರದ ಸಚಿವಾಲಯ

(ಬಿ) ವಿಧಾನಸಭೆಯ ಸಚಿವಾಲಯ

(ಸಿ) ವಿಧಾನಪರಿಷತ್ತಿನ ಸಚಿವಾಲಯ

(ಡಿ) ಕರ್ನಾಟಕ ಉಚ್ಚ ನ್ಯಾಯಾಲಯ: ಸಂವಿಧಾನದ 229ನೇ ಅನುಚ್ಛೇದದ ಅನುಸಾರವಾಗಿ ನೇಮಕವಾದ ಅಧಿಕಾರಿಗಳು ಮತ್ತು ನೌಕರರು

(ಇ) ಕರ್ನಾಟಕ ಲೋಕಸೇವಾ ಆಯೋಗ

(ಎಫ್) ಇಲಾಖಾ ಮುಖ್ಯಸ್ಥರ ಒಂದು ಕಚೇರಿ

(ಜಿ) ಒಂದು ವಿಶೇಷ ಕಚೇರಿ ಅಥವಾ ಕಾರ್ಯಸಂಸ್ಥೆ

(ಎಚ್) ಯಾವುದೇ ರಾಜ್ಯ ಮಟ್ಟದ ಕಚೇರಿ ಅಥವಾ ಸಂಸ್ಥೆ

(ಐ) ಆ ಪ್ರದೇಶದ ಹೊರಗಿನ ಎಲ್ಲಾ ನಿಗಮಗಳು/ನಿಕಾಯಗಳು

(ಜೆ) ರಾಜ್ಯದ ರಾಜಧಾನಿಯಾದ ಬೆಂಗಳೂರಿನಲ್ಲಿ ಸೇವೆ ಸಲ್ಲಿಸುತ್ತಿರುವ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ/ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ/ಸದೃಶ ಸಂಸ್ಥೆಗಳು.

(ಕೆ) ಎಲ್ಲಾ ಮೇಲೆ ಹೇಳಿದ ಸಂಸ್ಥೆಗಳಿಗೆ ಸದೃಶವಾದ ಉದ್ದೇಶಗಳನ್ನು ಈಡೇರಿಸುವುದಕ್ಕಾಗಿ ನಂತರದ ದಿನಾಂಕದಂದು ಸೃಜಿಸಬಹುದಾದ ಯಾವುದೇ ಇತರ ಹೊಸ ಕಚೇರಿ ಅಥವಾ ರಾಜ್ಯ ಸರ್ಕಾರವು ಅಧಿಸೂಚಿಸಬಹುದಾದ ಅಂಥ ಇತರ ಕಚೇರಿ ಅಥವಾ ನಿಕಾಯ.

(ಎಲ್) ರಾಜ್ಯದಲ್ಲಿರುವ ಎಲ್ಲಾ ಕರ್ನಾಟಕ ರಾಜ್ಯ ಸರ್ಕಾರಿ ಅನುದಾನಿತ ವಿಶ್ವವಿದ್ಯಾನಿಲಯಗಳು.

**13ಎ. ರಾಜ್ಯ ಮಟ್ಟದ ಕಚೇರಿಗಳನ್ನು ಸ್ಥಳಾಂತರಿಸುವುದು.–** ಆ ಪ್ರದೇಶದಲ್ಲಿನ ಹುದ್ದೆಗಳ ಸಂಖ್ಯೆಯು ಆ ಪ್ರದೇಶದ ಜನಸಂಖ್ಯೆಗೆ ಪ್ರಮಾಣಾನುಸಾರವಾಗಿರುವಂತೆ, ಸರ್ಕಾರದ ಕೆಲವು ರಾಜ್ಯ ಮಟ್ಟದ ಕಚೇರಿಗಳು ಮತ್ತು ಸರ್ಕಾರದ ನಿಯಂತ್ರಣದಲ್ಲಿರುವ ನಿಕಾಯಗಳು ಮತ್ತು ಸಂಸ್ಥೆಗಳನ್ನು ಆ ಪ್ರದೇಶಕ್ಕೆ ಸ್ಥಳಾಂತರಿಸಲು, ರಾಜ್ಯಪಾಲರು ರಾಜ್ಯ ಸರ್ಕಾರವನ್ನು ಕೋರಬಹುದು.

**13ಬಿ. ವಯಸ್ಸಿನ ವಿನಾಯಿತಿ ಮತ್ತು ಕೃಪಾಂಕಗಳು.–** (ಎ) ಸ್ಥಳೀಯ ಉದ್ಯೋಗದಲ್ಲಿ ಸ್ಥಳೀಯ ವ್ಯಕ್ತಿಗಾಗಿ ಉದ್ಯೋಗ ಷರತ್ತಿನಲ್ಲಿ ವಯಸ್ಸಿಗಾಗಿ ಅಥವಾ ಯಾವುದೇ ಇತರ ವಿನಾಯತಿಯನ್ನು ರಾಜ್ಯಪಾಲರು ಆದೇಶದ ಮೂಲಕ ಕಲ್ಪಿಸಬಹುದು.

(ಬಿ) ಇಡೀ ಕರ್ನಾಟಕ ರಾಜ್ಯದಲ್ಲಿ ಉದ್ಯೋಗದಲ್ಲಿ ಸ್ಥಳೀಯ ವ್ಯಕ್ತಿಗೆ ಕೃಪಾಂಕಗಳು ಅಥವಾ ಇತರ ರಿಯಾಯತಿಗಳನ್ನು ಆದೇಶದ ಮೂಲಕ ರಾಜ್ಯಪಾಲರು ಕಲ್ಪಿಸಬಹುದು.

**13ಸಿ. ಸ್ಥಳೀಯ ಅಭ್ಯರ್ಥಿಗಳ ಹಕ್ಕಿನ ರಕ್ಷಣೆ ಮತ್ತು ಪ್ರವರ್ತನೆ :–** 1.1.2013ಕ್ಕೆ ಮುಂಚೆ ಹತ್ತು ವರ್ಷಗಳಿಗಿಂತ ಹೆಚ್ಚಾಗಿ ಸರ್ಕಾರದಲ್ಲಿ ದಿನಗೂಲಿ ಅಥವಾ ಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸಿರುವ ಮತ್ತು ನಿಯಮಿಸಲಾದ ಷರತ್ತುಗಳನ್ನು ಪೂರೈಸಿರುವ ಮತ್ತು ಸರ್ಕಾರದಿಂದ ಸ್ಥಳೀಯ ಆಧಾರದ ಮೇಲೆ ನೇಮಕಾತಿ ಹೊಂದಿದ ಸ್ಥಳೀಯ ಅಭ್ಯರ್ಥಿಗಳಿಗೆ ನೇಮಕಾತಿಯಲ್ಲಿ ಮತ್ತು ಸರ್ಕಾರವು ನಿಯಮಿಸಬಹುದಾದ ಇತರ ಪ್ರಯೋಜನಗಳಲ್ಲಿ ಕೆಲವು ರಿಯಾಯಿತಿಗಳನ್ನು ನೀಡಬಹುದು

**ಹೆಚ್.ಆರ್. ಭಾರದ್ವಾಜ್,**
ಕರ್ನಾಟಕ ರಾಜ್ಯಪಾಲರು

ಕರ್ನಾಟಕದ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಲ್.ಲೋಕನಾಥ**
ಸರ್ಕಾರದ ಜಂಟಿ ಕಾರ್ಯದರ್ಶಿ,
(ಹೈದ್ರಾಬಾದ್–ಕರ್ನಾಟಕ ವಿಶೇಷ ಕೋಶ) ಸಿಅಸುಇ.

**PR-52**
**SC-3000**

## URBAN DEVELOPMENT SECRETARIAT

### NOTIFICATION NO.UDD 213 BMR 2011 (P) BANGALORE, DATED: 21-11-2013.

Whereas the draft of the Zonal Regulations of Master Plan of Local Planning Area of BIAAPA (Amendment) Regulations, 2012, was published as required by section 13E of the Karnataka Town and Country Planning Act, 1961 (Karnataka Act No. 11 of 1963) in Notification No.UDD 213 BMR 2011 (P) Dated: 18-07-2012, in part IV-A of the Karnataka Gazette Extra-ordinary dated 27th December, 2012 inviting objections and suggestions from all persons likely to be affected thereby within thirty days from the date of its publication in Official Gazette.

And whereas the said Gazette was made available to public on 27th December, 2012.

And Whereas no objections and suggestions have been received in this behalf by the State Government.

Now, therefore, in exercise of the powers conferred by section 13E of the Karnataka Town and Country Planning Act, 1961 (Karnataka Act No.11 of 1963) the Government of Karnataka hereby makes the following regulations, namely:-

**REGULATIONS**

**1. Title and commencement.-** (1) These regulations may be called the Zonal Regulations of Master plan of Local Planning Area of BIAAPA (Amendment) Regulations, 2013.

(2) They shall come into force from the date of their publication in the official Gazette.

**2. Amendment of regulation 9.3.-** In the Zonal regulations of Master plan of the local planning area of BIAAPA, in regulation 9.3, in table-2, for the words, letters and figures `` The height of the buildings in BIAAPA is limited to the maximum of G +7 floor or 25 meters whichever is lower'', the words, brackets and figures`` the height of the buildings in BIAAPA is limited to the height permitted by the Airport Authority of India, under the provisions of the Aircraft Act, 1934 (Central Act 22 of 1934) subject to maximum floor area ratio permitted by the State Government in the Zonal regulation'' shall be substituted.

By Order and in the name of the Governor of Karnataka,

**V. HANUMANTHAIAH**
Under Secretary to Government ,
Urban Development Department.

**PR.783**
**SC.300**

## REVENUE SECRETARIAT

**NO: RD 376 LGP 2013 BANGALORE, DATED: 24-01-2014.**

**NOTIFICATION**

The draft of the following rules further to amend the Karnataka Land Revenue Rules, 1966 which the Government of Karnataka, proposes to make in exercise of the powers conferred by section 94C read with section 197 of the Karnataka Land Revenue Act, 1964 (Karnataka Act 12 of 1964) is hereby published as required by sub-section (1) of section 197 of the said Act for the information of persons likely to be affected thereby and notice is hereby given that the said draft will be taken into consideration after the expiry of thirty days from the date of its publication in the official Gazette.

Any objection or suggestion, which may be received by the State Government from any person with respect to the said draft before the expiry of the period specified above will be considered by the State Government. Objections and suggestions may be addressed to the Principal Secretary to Government, Revenue Department, Multi Storied Building, Bangalore – 560 001.

**DRAFT RULES**

**1. Title and commencement.-** (1) These rules may be called the Karnataka Land Revenue (Amendment) Rules, 2014.

(2) They shall come into force on the date of their publication in the Official Gazette.

**2. Insertion of new Chapter XIII-B.-** After Chapter XIII-A of the Karnataka Land Revenue Rules, 1966, the following shall be inserted, namely:-

"**CHAPTER XIII-B**

**Grant of Land in case of construction of Dwelling house in occupied Government lands in areas other than specified limits of Bruhat Bangalore Mahanagarapalike, City Corporations, City Municipal Councils, Town Municipal Councils, Town Panchayats in the State**

**108-O. Prescribed Authority.-** The Prescribed Authority for the purpose of this chapter, shall be the Concerned Jurisdictional Tahsildar of the Taluk.

**108-P. Power of the Prescribed Authority.-** The Prescribed Authority while exercising the powers under section 94C shall have the following powers, namely:-

(a) Power to obtain, report from officers and authorities in respect of land unauthorizedly occupied on which unauthorised construction is made as it may deem necessary;

(b) Power to measure or cause to be measured the unauthorized constructions and the land appurtenant thereof;

(c) Power to reject any application after scrutiny of the same, in case of failure by the applicant to comply with any of the conditions as specified in the Act.

**108-Q. Application for grant of land and procedure for verification.-** Application for grant of land under section 94C shall be made by a person in Form No.3A within three months from the date of commencement of the Karnataka Land Revenue (Amendment) Rules, 2014, along with a fee of Rs.50/-(Rupees fifty only) in the form of cash payable in the jurisdictional Atalji Janasnehi Kendra's accompanied by a sital plan of the land wherein the unauthorized construction is shown, indicating the site and location of unauthorised construction. The entire process of grant of land shall be completed within a period of two years from the date of commencement of the Karnataka Land Revenue (Amendment) Rules, 2014.

**108-R. Manner of enquiry.-** The Prescribed Authority shall issue notice in Form No.3B, to every person who has made an application in Form No.3A, to appear before him, on such date as may be specified therein and to produce documents if any in support of his claim. The Prescribed Authority may also issue public notice to be notified on the notice board of the Local Authority and by beat of Tom tom fixing dates for conduct of enquiry which shall be held in the presence of the residents of the village. On completion of the enquiry, the prescribed authority shall in all eligible cases pass a provisional order granting the land.

**108-S. Amount to be paid for grant of land.-** After the provisional grant of land under rule 108-R, the grantee shall pay the amount as specified in the Schedule within one month from the date of provisional order of grant, and shall get the deed executed at his cost. On execution of the title deed, the Prescribed Authority shall issue an order of grant of land.

**108-T. Contravention of the other conditions specified under section 94C of the Act.-** If the grantee contravenes any of the conditions specified under section 94C of the Act, the provisions contained in rule 25 of the Land Grant Rules, 1969 shall mutatis mutandis shall apply to the cancellation of such grants under this chapter.

**3. Insertion of new form 3A and 3B.-** In the said Rules, after form 3 the following shall be inserted, namely:-

**FORM-3A**

(see rule 108-Q)

Application of regularisation of unauthorized construction.

| | | | | | | | |
|---|---|---|---|---|---|---|---|
| 1. | Name of the Applicant | | | | | | |
| 2. | Age of Applicant | | | | | | |
| 3. | Father's/Husband's name | | | | | | |
| 4. | Address of the Applicant | | | | | | |
| 5. | Occupation | | | | | | |
| 6. | Is the applicant a member of SC/ST<br>(Certificate to be enclosed) | | | | | | |
| 7. | Gross annual income of the applicant<br>(Income Certificate from Tahsildar<br>To be enclosed) | | | | | | |
| 8. | Particulars of all the unauthorised construction made by the applicant or any member of his family | District | Village | Sl.No. | Area of Bldg | Dimensions of the site appurtenant to the bldg. | No.of floors including ground floor |
| 9. | Particulars of all the unauthorised construction sought to be regularised. | District | Village | Sl.No. | Area of Bldg | Dimensions of the site appurtenant to the bldg. | No.of floors including ground floor |
| (Copy of the Sale Deed of the revenue site, if any, site plan of the land, ground plan indicating the alleviations sections of the building and specification of the work to be enclosed) | | | | | | | |
| 10. | Date of completion of the unauthorized construction (supporting documents to be enclosed) | | | | | | |
| 11. | Particulars of the site/house already owned by the applicant or any member of his family within the Urban Area/Rural Area. | State and District | Taluk and Village | Sy.No. | Extent | | |
| 12. | Whether any other Members of the family of the applicant has unauthorised construction and applied for its regularization and if so, the details thereof. | Extent of Built uparea | Sy.No. | Village | Taluk | | |
| 13. | Whether the photo of the applicant along with the photo of the UAC is enclosed. | | | | | | |

Certified that the particulars furnished above are true and correct to the best of my knowledge.

Place:

Date: Signature of the Applicant

**ACKNOWLEDGEMENT**

Registration No………………………Dated…………………Received an application from Shri/Smt………………………………………for regularization of Unauthorised Construction of land in Sy.No…………….............of Village..................................of Taluk.

Receiving Clerk in the
Office with Seal.

**FORM-3B**

(see rule 108-R)

Summons for Appearance for Production of Documents

From:

………………………………of Taluk………………………………District

To

Sri/Smt ……………………………………………………………….son of daughter of………………………………residing in…………………………village of…………………………. Circle.

Whereas for the purpose of an enquiry into………………………….. (here specify the subject of the enquiry) your attendance is considered necessary to examine you as a party to give evidence as a witness/to produce document, you are hereby summoned to appear in persons/by an authorised agent before the undersigned in his office on…....................(here specify date) …………………… at…………………..(here specify time) for the purpose of giving evidence/to produce the document specified in the margin or for both.

Given under my hand this day of…………………………………

Signature

Designation

Seal: (to be affixed if such Officer has a seal).

Note: Strike out whichever is not applicable.

**SCHEDULE**

(see rule 108-S)

**Rate for Regularisation**

| **Sl. No.** | **Place** | **Area** | **Dimensions (in feets)** | **Rate of regularization Rs. per Sq.ft.** |
|---|---|---|---|---|
| 1. | State (Rural Area) | Covers Rural Area in the State. | Up to 30 X 40 | 10 % of the guidance value. **However, for SC/ST, Physically Handicapped, Ex-serviceman and Poura Karmika's 5% of the guidance value.** |
| | | | Up to 40 X 60 | 20% of the guidance value. **However, for SC/ST, Physically Handicapped, Ex-serviceman and Poura Karmika's 10% of the guidance value.** |

By Order and in the name of the Governor of Karnataka

**UMADEVI**

Under Secretary to Government,

Revenue Department (Land Grants-1).

**P.R. 57**
**SC - 1000**

**ಆರ್ಥಿಕ ಸಚಿವಾಲಯ**

**ತಿದ್ದೋಲೆ**

**ಸಂಖ್ಯೆ : ಆಇ 300 ವೆಚ್ಚ–12/13, ಬೆಂಗಳೂರು, ದಿನಾಂಕ : 19–04–2013.**

ಸರ್ಕಾರದ ವಿವಿಧ ಇಲಾಖೆಗಳ ಕಾಮಗಾರಿಗಳನ್ನು ಕೈಗೊಳ್ಳುವ ಸಲುವಾಗಿ ಜಿಲ್ಲಾ ನಿರ್ಮಿತಿ ಕೇಂದ್ರಗಳಿಗೆ ಹಾಗೂ ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮಕ್ಕೆ ಕೆಟಿಪಿಪಿ ಕಾಯ್ದೆ, 1999ರ ಕಲಂ 4(ಜಿ)ಅಡಿಯಲ್ಲಿ 2013–14ನೇ ಸಾಲಿಗೆ ವಿನಾಯಿತಿ ನೀಡಿ ದಿನಾಂಕ : 16–04–2013 ರಂದು ಹೊರಡಿಸಿರುವ ಅಧಿಸೂಚನೆ ಸಂ. ಆಇ 300 ವೆಚ್ಚ–12/2013 ರ ಕಂಡಿಕೆ 2ನ್ನು ದಿನಾಂಕ : 16–04–2013ರಿಂದಲೇ ಜಾರಿಗೆ ಬರುವಂತೆ ಈ ಕೆಳಕಂಡಂತೆ ತಿದ್ದಿ ಓದಿಕೊಳ್ಳತಕ್ಕದ್ದು.

"ಕಾಮಗಾರಿಗಳನ್ನು ನಿರ್ಮಿತಿ ಕೇಂದ್ರಗಳಿಗೆ ವಹಿಸುವ ಮುನ್ನ ಕಟ್ಟಡಗಳ ನಿರ್ಮಾಣಕ್ಕೆ ನಿರ್ಮಿತಿ ಕೇಂದ್ರಗಳ ಉತ್ಪಾದನಾ ಘಟಕಗಳಲ್ಲಿ ತಯಾರಾದ ಸಾಮಗ್ರಿಗಳನ್ನು ಬಳಸುವುದನ್ನು ಹಾಗೂ ನಿರ್ಮಿತಿ ಕೇಂದ್ರಗಳ ಇಂಜಿನಿಯರ್‌ಗಳ ಮೇಲ್ವಿಚಾರಣೆಯಲ್ಲಿಯೇ ಕಟ್ಟಡಗಳ ನಿರ್ಮಾಣ ಕಾಮಗಾರಿ ಕೈಗೊಳ್ಳುವುದನ್ನು ಜಿಲ್ಲಾಧಿಕಾರಿಗಳು (ನಿರ್ಮಿತಿ ಕೇಂದ್ರದ ಅಧ್ಯಕ್ಷರು) ಪ್ರಮಾಣೀಕರಿಸಬೇಕು. ಉತ್ತಮ ಗುಣಮಟ್ಟದ ಕಾಮಗಾರಿಗಳನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ಸಂಬಂಧಿತ ಇಲಾಖೆಗಳು ದೃಢಪಡಿಸಿಕೊಳ್ಳುವುದು".

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಎಸ್. ಶಿವರಾಮ್**

ಸರ್ಕಾರದ ಉಪ ಕಾರ್ಯದರ್ಶಿ (ಆಡಳಿತ),

ಆರ್ಥಿಕ ಇಲಾಖೆ.

**P.R. 1**
**SC - 25**

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಆಇ 383 ವೆಚ್ಚ–12/13, ಬೆಂಗಳೂರು, ದಿನಾಂಕ : 20–04–2013.**

ಕರ್ನಾಟಕ ವಿಧಾನಸಭಾ ಚುನಾವಣೆ–2013ರ ಕಾರ್ಯಗಳಿಗಾಗಿ, ಮುಖ್ಯ ಚುನಾವಣಾಧಿಕಾರಿಗಳು ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಗಳಿಂದ ಅಗತ್ಯ ಬಸ್ಸುಗಳನ್ನು (KSRTC/MBTC/NWKRTC/NEKRTC ಮತ್ತು ಇತರೆ ಸರ್ಕಾರಿ ಸ್ವಾಮ್ಯದ) ಸರ್ಕಾರವು ನಿಗದಿಪಡಿಸಿರುವ ದರದಲ್ಲಿ ಬಾಡಿಗೆ ಆಧಾರದಲ್ಲಿ ಪಡೆಯುವುದಕ್ಕೆ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸಿ.ಆ.ಸು. ಇಲಾಖೆ (ಚುನಾವಣೆಗಳು)ಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಉತ್ತಮ ಗುಣಮಟ್ಟದ ಸೇವೆಯನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ಸಿ.ಆ.ಸು. ಇಲಾಖೆ (ಚುನಾವಣೆಗಳು) ವಿಭಾಗವು ದೃಢಪಡಿಸಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕಾಂತ ಎಸ್.**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ).

**P.R. 2**

**SC - 25**

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಆಇ 345 ವೆಚ್ಚ–12/13, ಬೆಂಗಳೂರು, ದಿನಾಂಕ : 22–04–2013.**

ರಾಜ್ಯದ ಮೈಸೂರು ಮತ್ತು ತುಮಕೂರು ಜಿಲ್ಲೆಗಳಲ್ಲಿ ತಲಾ 5 ಹೆಚ್ಚುವರಿ ಆಧಾರ್ ಶಾಶ್ವತ ನೋಂದಣಿ ಕೇಂದ್ರಗಳನ್ನು 6 ತಿಂಗಳ ಅವಧಿಗೆ ರೂ. 18.00 ಲಕ್ಷಗಳ ವೆಚ್ಚದಲ್ಲಿ ಸ್ಥಾಪಿಸಲು ಮತ್ತು ರಾಜ್ಯದಲ್ಲಿ Karnataka Resident Data Hub (KRDH) ನ್ನು ಅನುಷ್ಠಾನಗೊಳಿಸಲು ಮೆ. Genisys ಸಂಸ್ಥೆಯ ಸೇವೆಯನ್ನು ರೂ. 17.90 ಲಕ್ಷಗಳು + ತೆರಿಗೆಗಳು ವೆಚ್ಚದಲ್ಲಿ ಮೂರು ತಿಂಗಳ ಅವಧಿಗೆ ಪಡೆಯಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ)ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸಿ.ಆ.ಸು. ಇಲಾಖೆ ಇ–ಆಡಳಿತ)ಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಉತ್ತಮ ಗುಣಮಟ್ಟದ ಸೇವೆಯನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ಸಿ.ಆ.ಸು. ಇಲಾಖೆ (ಇ–ಆಡಳಿತ) ವಿಭಾಗವು ದೃಢಪಡಿಸಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕಾಂತ ಎಸ್.**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ).

**P.R. 3**

**SC - 25**

## ಆರ್ಥಿಕ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಆಇ 365 ವೆಚ್ಚ–12/13, ಬೆಂಗಳೂರು, ದಿನಾಂಕ : 22–04–2013.**

ಶ್ರೀ ರಾಘವೇಂದ್ರ ನಾಯಕ್, ಯೋಜನಾ ವ್ಯವಸ್ಥಾಪಕರು, ರಾಜ್ಯ ದತ್ತ ಕೇಂದ್ರ ಇವರ ಸೇವೆಯನ್ನು ರಾಜ್ಯ ದತ್ತ ಕೇಂದ್ರದ ಪ್ರಧಾನ ಸಮಾಲೋಚಕರನ್ನಾಗಿ ದಿನಾಂಕ : 01–04–2013 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಒಟ್ಟು ರೂ. 30.60 ಲಕ್ಷಗಳು + ತೆರಿಗೆಗಳು ವೆಚ್ಚದಲ್ಲಿ ಪಡೆಯಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999ರ ಕಲಂ 4(ಜಿ)ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸಿ.ಆ.ಸು.ಇ (ಇ–ಆಡಳಿತ) ಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಉತ್ತಮ ಗುಣಮಟ್ಟದ ಸೇವೆಯನ್ನು ಸಮಂಜಸ ದರದಲ್ಲಿ ಸಂಗ್ರಹಿಸುವುದನ್ನು ಸಿ.ಆ.ಸು.ಇ. (ಇ–ಆಡಳಿತ) ವಿಭಾಗವು ದೃಢಪಡಿಸಿಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಕಾಂತ. ಎಸ್.**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ).

**P.R. 4**

**SC - 25**

ಸರ್ಕಾರಿ ಕೇಂದ್ರ ಮುದ್ರಣಾಲಯ, ಘಟಕ–2, ಬೆಂಗಳೂರು–59.